# ಕೊಣ್ಣೂರು ಪರಿಸರದ ಪುರಾತತ್ವ ಅಧ್ಯಯನ

ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಎಂ.ಫಿಲ್. ಸಂಪ್ರಬಂಧ


ಸಂಶೋಧಕ

**ಸೂರ್ಯಕಾಂತ ಪಿ. ಕೊಕಟನೂರ**

ಮಾರ್ಗದರ್ಶಕರು

**ರಮೇಶ ನಾಯಕ**

ಹಿರಿಯ ಶ್ರೇಣಿ ಅಧ್ಯಾಪಕರು





ಸಮಾಜ ವಿಜ್ಞಾನಗಳ ನಿಕಾಯ

ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೭

# ಕೊಣ್ಣೂರು ಪರಿಸರದ ಪುರಾತತ್ವ ಅಧ್ಯಯನ

ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಎಂ.ಫಿಲ್. ಸಂಪ್ರಬಂಧ


ಸಂಶೋಧಕ

**ಸೂರ್ಯಕಾಂತ ಪಿ.ಕೊಕಟನೂರ**





ಮಾರ್ಗದರ್ಶಕರು

**ರಮೇಶ ನಾಯಕ**

ಹಿರಿಯ ಶ್ರೇಣಿ ಅಧ್ಯಾಪಕರು





ಸಮಾಜ ವಿಜ್ಞಾನಗಳ ನಿಕಾಯ

ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೭

# ಪ್ರಮಾಣ ಪತ್ರ

**"ಕೊಣ್ಣೂರು ಪರಿಸರದ ಪುರಾತತ್ವ ಅಧ್ಯಯನ"** ಎಂಬ ಸಂಪ್ರಬಂಧವನ್ನು ರಮೇಶ ನಾಯಕ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಎಂ.ಫಿಲ್. ಪದವಿಗಾಗಿ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಸಂಪ್ರಬಂಧವು ಮೂಲವಾಗಿದ್ದು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸೂರ್ಯಕಾಂತ ಪಿ. ಕೊಕಟನೂರ

ಸಂಶೋಧಕ

ದಿನಾಂಕ 30 JUL 2007 ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ

ಸ್ಥಳ : ವಿದ್ಯಾರಣ್ಯ ಕನ್ನಡ ವಿಶ್ವವಿದ್ಯಾಲಯ, ಹಂಪಿ

# ದೃಢೀಕರಣ ಪತ್ರ

**"ಕೊಣ್ಣೂರು ಪರಿಸರದ ಪುರಾತತ್ವ ಅಧ್ಯಯನ"** ಎಂಬ ಸಂಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ ಸೂರ್ಯಕಾಂತ ಪಿ. ಕೊಕಟನೂರ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಸಂಪ್ರಬಂಧವು ಮೂಲವಾಗಿದ್ದು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

R Nayik

ರಮೇಶ ನಾಯಕ

ಮಾರ್ಗದರ್ಶಕರು

ದಿನಾಂಕ 30 JUL 2007 ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ

ಸ್ಥಳ : ವಿದ್ಯಾರಣ್ಯ ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಕೃತಜ್ಞತೆಗಳು

ಇತಿಹಾಸ ಮತ್ತು ಪುರಾತತ್ವ ವಿಷಯಗಳಲ್ಲಿ ಆಸಕ್ತಿ ಹೊಂದಿರುವ ನಾನು, ಹಂಪಿಯ ಕನ್ನಡ ವಿಶ್ವವಿದ್ಯಾಲಯದ, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗದಲ್ಲಿ ಎಂ.ಫಿಲ್ ಪದವಿ ಅಧ್ಯಯನ ಕೈಗೊಂಡನು. **ಕೊಣ್ಣೂರು ಪರಿಸರ ಪುರಾತತ್ವ ಅಧ್ಯಯನ** ಎಂಬ ವಿಷಯವನ್ನು ನನ್ನ ಅಧ್ಯಯನಕ್ಕೆ ಆಯ್ದುಕೊಂಡೆ. ಕಾರಣ ಇತಿಹಾಸ ಅಧ್ಯಯನಗಳ ಇತ್ತೀಚಿನ ಬೆಳವಣಿಗೆಯಲ್ಲಿ ಅಲಕ್ಷಿತ ಸಮುದಾಯ, ಸ್ಥಳ, ಘಟನೆಗಳು ಹಾಗೂ ವಿಷಯಗಳ ಕುರಿತು ಹೆಚ್ಚಿನ ಚರ್ಚೆಗಳು ಚಾಲ್ತಿಯಲ್ಲಿವೆ. ಈ ಹಿನ್ನೆಲೆಯಲ್ಲಿ ಕೊಣ್ಣೂರು ಪರಿಸರ ಪೂರ್ವ ಇತಿಹಾಸದಿಂದ ಒಳಗೊಂಡು ಆಧುನಿಕ ಕಾಲದವರೆಗೂ ಅನೇಕ ಐತಿಹಾಸಿಕ ಮಹತ್ವದ ಘಟನೆಗಳನ್ನು ಒಳಗು ಮಾಡಿಕೊಂಡಿರುವ ಪ್ರದೇಶವಾಗಿದೆ. ಇಂಥ ಉಪಯಕ್ತ ಮಾಹಿತಿಗಳನ್ನು ಕರ್ನಾಟಕ ಇತಿಹಾಸ, ಪುರಾತತ್ವ ಹಾಗೂ ಸಂಸ್ಕೃತಿ ಅಧ್ಯಯನಗಳಿಗೆ ಅಣಿ ಮಾಡಿಕೊಡುವ ಪ್ರಯತ್ನ ಹಿನ್ನಲೆಯಲ್ಲಿ ಪ್ರಸ್ತುತ ಅಧ್ಯಯನ ಕೈಗೊಳ್ಳಲಾಗಿದೆ.

ಅಧ್ಯಯನಕ್ಕೆ ಪ್ರೋತ್ಸಾಹಿಸಿರುವ ಹಿಂದಿನ ಕುಲಪತಿಗಳಾದ ಡಾ.ಬಿ.ಎ.ವಿವೇಕ ರೈ, ಇಂದಿನ ಕುಲಪತಿಗಳಾದ ಡಾ.ಕೆ.ವಿ.ನಾರಾಯಣ ಹಾಗೂ ಕುಲಸಚಿವರಾದ ವಿ.ಶಂಕರ್ ಅವರಿಗೆ ಹಾಗೂ ಅಧ್ಯಯನಾಂಗ ನಿರ್ದೇಶಕರಾಗಿದ್ದ ಡಾ.ಟಿ.ಆರ್.ಚಂದ್ರಶೇಖರ್ ಹಾಗೂ ನಿರ್ದೇಶಕರಾಗಿರುವ ಡಾ.ಡಿ.ಪಾಂಡುರಂಗ ಬಾಬು ಅವರಿಗೆ ಹೃತ್ಪೂರ್ವಕ ವಂದನೆಗಳನ್ನು ಸಲ್ಲಿಸುತ್ತೇನೆ.

ಎಂ.ಫಿಲ್ ಅಧ್ಯಯನ ಕೈಗೊಳ್ಳಲು ಅನುಕೂಲ ಮಾಡಿಕೊಟ್ಟ ಮುಧೋಳದ ಶ್ರೀ ಎನ್.ಆರ್.ಕಂಠಿ ಮಹಾವಿದ್ಯಾಲಯದ ಪ್ರಾಚಾರ್ಯರಾದ ಶ್ರೀ ಜಿ.ಎಂ.ಚನ್ನಪ್ಪಗೋಳರವರಿಗೆ ಹಾಗೂ ಬಾಗಲಕೋಟೆಯ ಶ್ರೀ ಬಿ.ವಿ.ವಿ.ಎಸ್ ಸಂಸ್ಥೆಯ ಕಾರ್ಯಧ್ಯಕ್ಷರಾದ ಶ್ರೀ ವೀರಣ್ಣಾ ಚರಂತಿಮಠ ಹಾಗೂ ಆಡಳಿತ ಮಂಡಳಿಗೂ ನನ್ನ ಕೃತಜ್ಞತೆಗಳು.

ಅಧ್ಯಾಪಕರಾದ ರಮೇಶ ನಾಯಕರವರು ಪ್ರಬಂಧವನ್ನು ಪೂರ್ಣಗೊಳಿಸುವಲ್ಲಿ ಮಾರ್ಗದರ್ಶಕರಾಗಿ ನೆರವು ನೀಡಿದ್ದಾರೆ. ವಿಷಯಕ್ಕೆ ಸಂಬಂಧಪಟ್ಟಂತೆ ಉಪಯುಕ್ತವಾದ ಮಾಹಿತಿಗಳನ್ನು ಹಾಗೂ ಸಲಹೆ ಸೂಚನೆಗಳನ್ನು ನೀಡಿದ್ದಾರೆ. ಕ್ಷೇತ್ರಕಾರ್ಯದಲ್ಲಿ ಹೊಸದಾಗಿ ಹುಡುಕಿಕೊಂಡಿರುವ ಸಂಗತಿಗಳನ್ನು ಪರಾಮರ್ಶಿಸುವಲ್ಲಿ ಸಹಾಯ ಮಾಡಿದ್ದಾರೆ. ಅವರಿಗೆ ತುಂಬು ಹೃದಯದ ಕೃತಜ್ಞತೆಗಳು.

ವಿಭಾಗದ ಗುರುಗಳಾದ ಡಾ.ಸಿ.ಮಹಾದೇವ, ಡಾ.ಸಿ.ಎಸ್.ವಾಸುದೇವನ್, ಡಾ.ವ್ಹಿ.ಎಸ್.ಬಡಿಗೇರ ಹಾಗೂ ಡಾ.ವೈ.ಸೋಮಶೇಖರರವರು ನನ್ನ ಎಂ.ಫಿಲ್ ಅಧ್ಯಯನಕ್ಕೆ ಸಂಬಂಧಿಸಿದ ಪಾಠ ಪ್ರವಚನ ಹಾಗೂ ಸೂಕ್ತವಾದ ಸಲಹೆ ಸೂಚನೆಗಳನ್ನು ನೀಡಿರುತ್ತಾರೆ. ಗುರುಗಳಿಗೆ ಹಾಗೂ ವಿಭಾಗದ ಸದಸ್ಯರುಗಳಾದ ನಾಗಯ್ಯ ಹಿರೇಮಠ ಹಾಗೂ ರಮೇಶ್ ಅವರಿಗೂ ನನ್ನ ವಂದನೆಗಳು.

ಅಭಿವೃದ್ಧಿ ಅಧ್ಯಯನ ವಿಭಾಗದಲ್ಲಿ ಅಧ್ಯಾಪಕರಾಗಿರುವ ಡಾ.ಎಚ್.ಡಿ.ಪ್ರಶಾಂತ್ ಹಾಗೂ ಜನಾರ್ಧನ ಮತ್ತು ಅಧ್ಯಯನಾಂಗದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಡಿ.ವಿ.ಪ್ರಕಾಶ್ ಹಾಗೂ

ಶಿವಕುಮಾರ್ ಜಿ, ಮಿತ್ರರಾದ ಡಾ.ವಿ.ಸಿ.ಮಾರುತಿ ಅವರು ನನ್ನ ಅಧ್ಯಯನದಲ್ಲಿ ಸಹಕರಿಸಿದ್ದಾರೆ ಅವರಿಗೆ ನನ್ನ ಕೃತಜ್ಞತೆಗಳು.

ಪ್ರಬಂಧ ರೂಪಿಸುವಲ್ಲಿ ಅಗತ್ಯವಾದ ಪುಸ್ತಕಗಳನ್ನು ನೀಡಿದ ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಗ್ರಂಥಾಲಯದ ಸಿಬ್ಬಂದಿವರ್ಗ ಹಾಗೂ ಕರ್ನಾಟಕ ವಿಶ್ವವಿದ್ಯಾಲಯದ ಸಹಾಯಕ ಗ್ರಂಥಪಾಲಕರಾದ ಆರ್.ಜಿ.ಮಠಪತಿ ಮತ್ತು ಕನ್ನಡ ಸಂಶೋಧನಾ ಸಂಸ್ಥೆಯ (ಕೆಆರ್‌ಐ) ಹಾಗೂ ಮುಧೋಳದ ಎಸ್.ಆರ್.ಕಂಠಿ ಪದವಿ ಮಹಾವಿದ್ಯಾಲಯದ ಗ್ರಂಥಪಾಲಕರಾದ ಎಸ್.ಎಸ್.ಕಣಗಿಯವರಿಗೂ ನನ್ನ ಕೃತಜ್ಞತೆಗಳು.

ನನ್ನ ಪೂಜ್ಯ ತಂದೆ-ತಾಯಿಯವರಿಗೂ ಚಿಕ್ಕಪ್ಪ-ಚಿಕ್ಕಮ್ಮರಿಗೆ, ಸಹೋದರರಾದ ಶಿವಯೋಗಿ ಬಿದರಿ, ನಿವೃತ್ತ ಶಿಕ್ಷಣಾಧಿಕಾರಿಗಳು, ಮಹಾದೇವ, ಮುರುಘೇಂದ್ರ ಇವರಿಗೆ ನನ್ನ ನಮನಗಳು ಪ್ರಕಾಶ್, ವಿಶ್ವನಾಥ, ಸಹೋದರಿಯರಾದ ದಾನಮ್ಮ, ವಿದ್ಯಾ, ಶೈಲಜಾ ಹಾಗೂ ಚೈತ್ರಾ ನನ್ನ ಕೆಲಸದಲ್ಲಿ ನೆರವು ನೀಡಿದ್ದಾರೆ. ಅವರಿಗೆ ನನ್ನ ನೆನೆಕೆಗಳು. ನನ್ನ ವಿದ್ಯಾವ್ಯಾಸಂಗವನ್ನು ಸದಾ ಪ್ರೋತ್ಸಾಹಿಸುತ್ತಾ ಬಂದಿರುವ ನನ್ನ ಚಿಕ್ಕಪ್ಪನವರಾದ ಬಸವಪ್ರಭು ಕೊಕಟನೂರ, ನಿವೃತ್ತ ಪೋಲಿಸ್ ಮಹಾನಿರೀಕ್ಷಕರು (ಐಜಿಪಿ) ಅವರು ಹಾಗೂ ಚಿಕ್ಕಮ್ಮ ಶ್ರೀಮತಿ ನೀಲಮ್ಮ ಅವರಿಗೂ ನನ್ನ ಪೂಜ್ಯ ವಂದನೆಗಳು.

ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಎಲ್ಲ ರೀತಿಯ ಸಹಕಾರ ನೀಡಿ ನನ್ನ ಶೈಕ್ಷಣಿಕ ಚಟುವಟಿಕೆಗಳನ್ನು ಪ್ರೋತ್ಸಾಹಿಸುತ್ತಾ ಬಂದಿರುವ ನನ್ನ ಪತ್ನಿಯಾದ ಶಾಲಿನಿ ಮತ್ತು ಪುತ್ರ ಸುಮಿತ್ ಹಾಗೂ ಅಳಿಯಂದಿರಾದ ಚನ್ನಬಸಪ್ಪ, ಪ್ರಕಾಶ್, ರಮೇಶ್ ಕಲ್ಯಾಣ ಶೆಟ್ಟಿ ಹಾಗೂ ಸಹೋದರಿಯರಾದ ಶ್ರೀಮತಿ ರೇಖಾ, ಶ್ರೀಮತಿ ಸುಮಾ ಹಾಗೂ ಶ್ರೀಮತಿ ರೇಷ್ಮಾ ಕಲ್ಯಾಣ ಶೆಟ್ಟಿ ಹಾಗೂ ಕುಟುಂಬದ ಸದಸ್ಯರೆಲ್ಲರ ಸಹಕಾರವನ್ನು ನೆನೆಯದೆ ಇರಲಾರೆ.

ಸಂಪ್ರಬಂಧ ರಚನೆಗೆ ವಿವಿಧ ಪುಸ್ತಕ ಮಾಹಿತಿಗಳನ್ನು ನೀಡಿರುವ ಡಾ.ಸಿ.ಕೆ.ನಾವಲಗಿ ಮತ್ತು ಡಾ.ಚಂದ್ರಶೇಖರ ಅಕ್ಕಿ, ಕನ್ನಡ ಪ್ರಾಧ್ಯಾಪಕರು, ಜೆ.ಎಸ್.ಎಸ್ ಕಾಲೇಜು, ಗೋಕಾಕ್, ಡಾ.ಎ.ಬಿ.ವಗ್ಗರ, ಡಾ.ಚಂದ್ರಶೇಖರ ತಾಬೋಜಿ, ಡಾ.ಚಂದ್ರಕಾಂತ ಕೋಳಿಗುಡ್ಡ ಹಾಗೂ ಡಾ.ಸಂಗಮೇಶ್ ಕಲ್ಯಾಣ, ಅಧ್ಯಾಪಕರುಗಳಾದ ಜಿ.ಜಿ.ಕೋಟಿ, ಜಿ.ವಿ.ಕೊಕ್ಕಳಕಿ, ಎ.ಆರ್.ಜಿಗಜಿನ್ನ, ಪಿ.ಬಿ.ಬಡಿಗೇರ, ಮಂಜುನಾಥ ಹತ್ತಿಯವರ ಹಾಗೂ ಎಸ್.ಆರ್.ಕಂಠಿ ಕಾಲೇಜಿನ ಸಮಸ್ತ ಪ್ರಾಧ್ಯಾಪಕ ವೃಂದಕ್ಕೆ ನನ್ನ ಕೃತಜ್ಞತೆಗಳು.

ಪ್ರಬಂಧಕ್ಕೆ ಅಗತ್ಯವಿರುವ ಛಾಯಾಚಿತ್ರಗಳನ್ನು ಅಚ್ಚುಹಾಕಿಕೊಟ್ಟ ಮುಧೋಳದ ಜೆ.ಕೆ.ಇಮೇಜಸ್‌ನ ಶಶಿಕೊಪ್ಪದ ಹಾಗೂ ಮಾತ್ರ ಛಾಯಾಗ್ರಾಫಿಕ್ಸ್‌ನ ಮಹಾಂತೇಶ ಕೊಣ್ಣೂರರಿಗೂ ಹಾಗೂ ಸ್ನೇಹಿತರಾದ ಡಾ.ಗಂಗಾಧರ ದೊಡ್ಡಮನಿ, ಪಿ.ಎಲ್.ರಾಠೋಡ, ಮುಕುಂದರಾವ್ ದೇಸಾಯಿ, ಸಿ.ಬಸವರಾಜ್ ಅವರಿಗೂ ನನ್ನ ಕೃತಜ್ಞತೆಗಳು.

ಪ್ರಬಂಧವನ್ನು ಡಿಟಿಪಿ ಮಾಡಿದ ಫಾಂಟ್‌ಲೈನ್ ಗ್ರಾಫಿಕ್ಸ್‌ನ ಜಿ.ಉಲ್ಲಾಸ್ ಹಾಗೂ ಅಧ್ಯಯನದ ಸಂದರ್ಭದಲ್ಲಿ ಹಲವಾರು ಅನುಕೂಲತೆಗಳನ್ನು ಮಾಡಿಕೊಟ್ಟ ಶ್ರೀ ಗಾದೆಪ್ಪ, ಹೊಳಿಬಸಪ್ಪ, ಕಾಂತರಾಜ್, ವಿಶ್ವನಾಥ್, ರಂಗಸ್ವಾಮಿ, ಹುಲಗಪ್ಪ ನಾಯಕ, ಕುಮಾರ್, ಹುಲಿಯಪ್ಪ ಸೊಂಡೂರು ಅವರುನೆರವು ನೀಡಿದ್ದಾರೆ.

ಸೂರ್ಯಕಾಂತ ಕೊಕಟನೂರ

# ಪರಿವಿಡಿ

# ಅಧ್ಯಾಯ ಒಂದು

## ಪ್ರಸ್ತಾವನೆ

ಇತಿಹಾಸ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಬೆಳಗಾವಿ ಜಿಲ್ಲೆಯು ತನ್ನದೇ ಆದ ಮಹತ್ವವನ್ನು ಹೊಂದಿದೆ. ಸಾವಿರಾರು ವರ್ಷಗಳ ಇತಿಹಾಸವನ್ನು ಹೊಂದಿರುವ ಪ್ರಾಚೀನ ಕಾಲದ ಮಾನವನ ವಸತಿಯ ಕುರುಹುಗಳುಳ್ಳ ನೂರಾರೂ ನೆಲೆಗಳಿವೆ. ಇತಿಹಾಸ ಕಾಲದಿಂದಲ್ಲೂ ಅನೇಕ ರಾಜಮನೆತನಗಳು, ಸಾಮಂತರು, ಅಧಿಕಾರವರ್ಗ ಆಡಳಿತ ನಿರ್ವಹಿಸಿರುವ ಉಲ್ಲೇಖಗಳಿವೆ. ಜಿಲ್ಲೆಯಲ್ಲಿ ಹರಿದಿರುವ ಕೃಷ್ಣಾ, ಘಟಪ್ರಭಾ, ಮಲಪ್ರಭಾ ಎಂಬ ಪ್ರಮುಖ ನದಿಗಳು ಹಾಗೂ ಅವುಗಳ ಉಪನದಿಗಳು ಈ ಪ್ರದೇಶದ ಸಾಂಸ್ಕೃತಿಕ, ಇತಿಹಾಸದ ಬೆಳವಣಿಗೆಯ ಮೇಲೆ ಪ್ರಭಾವ ಬೀರಿರುವುದನ್ನು ಕಾಣುತ್ತೇವೆ. ಮೌರ್ಯ, ಶಾತವಾಹನ, ಕದಂಬ, ಬಾದಾಮಿ ಚಾಲುಕ್ಯ, ರಾಷ್ಟ್ರಕೂಟ, ಕಲ್ಯಾಣದ ಚಾಲುಕ್ಯರು ಹಾಗೂ ಅವರ ಸಾಮಂತರಾದ ಸವದತ್ತಿಯ ರಟ್ಟರು ಗೋವೆಯ ಕದಂಬರು, ಕೊಲ್ಲಾಪುರದ ಶಿಲಾಹಾರರು, ಬಿಜಾಪುರದ ಆದಿಲ್‌ಷಾಹಿ, ಮೊಗಲ್ ಸಾಮ್ರಾಟರು ಮತ್ತು ಕೊಂಕಣದ ಮರಾಠರು ಮುಂತಾದ ಚಿಕ್ಕ ಪುಟ್ಟ ಆಡಳಿತಾಧಿಕಾರಿಗಳು ಈ ಪ್ರದೇಶದಲ್ಲಿ ಆಳ್ವಿಕೆ ನಡೆಸಿದವು. ಇದಕ್ಕೆ ಸಾಕಷ್ಟು ಪುರಾವೆಗಳಿವೆ. ಪ್ರಾಗೈತಿಹಾಸ ಕಾಲದ ಅವಶೇಷಗಳು ಮತ್ತು ಇತಿಹಾಸ ಕಾಲದ ಶಾಸನ ಹಾಗೂ ಸ್ಮಾರಕಗಳು ಸ್ಥಳೀಯ ಚರಿತ್ರೆಯನ್ನು ಕಟ್ಟಿಕೊಡಲು ಸಹಾಯಕವಾಗಿವೆ.

ಬೆಳಗಾವಿ ಜಿಲ್ಲಾ ಪ್ರದೇಶದ ವ್ಯಾಪ್ತಿಯಲ್ಲಿ ಹಳೆಯ, ಮಧ್ಯ, ನವ ಹಾಗೂ ಬೃಹತ್ ಶಿಲಾಯುಗ ಮತ್ತು ಚಾರಿತ್ರಿಕ ಕಾಲಘಟ್ಟಕ್ಕೆ ಸಂಬಂಧಿಸಿದ ಹಲವಾರು ಅವಶೇಷಗಳು ಈವರೆಗೂ ಕಂಡುಬರುತ್ತವೆ. ಅವುಗಳಲ್ಲಿ ಆ ಕಾಲದಲ್ಲಿ ಬಳಸಿದ ಆಯುಧೋಪಕರಣ ಹಾಗೂ ವಸತಿನೆಲೆಯ ಕುರುಹುಗಳು ಅನ್ವೇಷಣೆಯ ಸಂದರ್ಭದಲ್ಲಿ ಕಂಡುಬಂದಿವೆ. ಇವೆಲ್ಲವು ಆಯಾ ಕಾಲದ ಸಂಸ್ಕೃತಿಯ ಪ್ರತೀಕಗಳಾಗಿವೆ. ಆ ಕಾಲದ ಜನರ ಜೀವನ ಕೌಶಲ್ಯ ನಿರ್ವಹಣೆ ತಿಳುವಳಿಕೆಯ ವಸ್ತುಗಳಾಗಿಯೂ ಮಾರ್ಪಟ್ಟಿವೆ.

ಅಧ್ಯಯನಕ್ಕೆ ಆಯ್ದುಕೊಂಡಿರುವ ಈಗಿನ ಕೊಣ್ಣೂರು ಗ್ರಾಮಕ್ಕೆ ಪ್ರಾಚೀನ ಕಾಲದಲ್ಲಿ `ಕೊಂಡನೂರು`[೧] ಎಂಬ ಹೆಸರಿತ್ತು. ಕೊಣ್ಣೂರು ಎಂಬ ಹೆಸರು ಹೇಗೆ ಬಂದಿತು ಎಂದು ಅವಲೋಕಿಸಿದಾಗ ಹಲವು ಐತಿಹ್ಯಗಳು ದೊರಕುತ್ತವೆ. ಕೊಣ್ಣೂರಿನ ಸಮೀಪದಲ್ಲಿರುವ ಶಿಂದಿಕುರಬೆಟ್ಟ ಗ್ರಾಮದ ದೇಸಾಯಿ ನದಿ ಆಚೆಗಿನ ಊರುಗಳಿಗೆ ಹಾಗೂ ಪಾಚ್ಛಾಪುರ ಗ್ರಾಮಕ್ಕೆ ವ್ಯಾಪಾರ ಸಂಬಂಧವಾಗಿ ಹೋಗಬೇಕಿತ್ತು. ಒಂದು ದಿನ ನದಿ ದಾಟುವಾಗ ದೇಸಾಯಿಯ ದೋಣಿ ಘಟಪ್ರಭ ನದಿಯ ಪ್ರವಾಹದಲ್ಲಿ ಮುಳುಗಿತು. ಅದನ್ನು ಕಂಡ ಅಂಬಿಗನು ಕೋಣ ಹಾಗೂ ಹಗ್ಗದ ಸಹಾಯದಿಂದ ದೇಸಾಯಿಯನ್ನು ರಕ್ಷಿಸಿದ. ಆದರೆ, ಈ ಸಂದರ್ಭದಲ್ಲಿ ಕೋಣ ನೀರಿನ ಸುಳಿಗೆ ಸಿಕ್ಕು ಸತ್ತಿತು. ದೇಸಾಯಿ ಬದುಕಿದ. ಈ ಘಟನೆಯ ಹಿನ್ನೆಲೆಯಲ್ಲಿ ಕೊಂಡನೂರು ಗ್ರಾಮಕ್ಕೆ ಕೋಣನವೂರು ಎಂದು ಕಾಲಾನಂತರ ಕೋಣನವೂರು - ಕೊಣ್ಣೂರು ಆಯಿತು ಎಂಬ ಐತಿಹ್ಯ[೨] ಜನಜನಿತವಾಗಿದೆ. ಐತಿಹ್ಯದ ಸಾಂದರ್ಭಿಕತೆ ಏನೇ ಆಗಿದ್ದರೂ ಕೊಂಡ ಎಂಬ ಶಬ್ದದ ಬಗೆಗೆ ವಿಶ್ಲೇಷಿಸಿಕೊಳ್ಳುವ ಅವಶ್ಯಕತೆ ಇದೆ. ಗ್ರಾಮದ ಪಕ್ಕದಲ್ಲಿ ಹರಿಯುವ ನದಿಯಲ್ಲಿ ಇರುವ ಕೊಂಡ ಅಥವಾ ಹೊಂಡ ಅತ್ಯಂತ ಆಳವು ಅಗಲವೂ ಆಗಿದೆ. ಈ ಹಿನ್ನೆಲೆಯಲ್ಲಿ ಕೊಂಡದ ಪಕ್ಕದಲ್ಲಿರುವ ಈ ಗ್ರಾಮಕ್ಕೆ ಕೊಂಡ ಎಂಬ ಶಬ್ದವು ಅನ್ವರ್ಥಕವಾಗಿ ಬಂದು ಕಾಲಾನಂತರ ಕೊಂಡ ಮತ್ತು ಊರು ಎಂಬ ಎರಡು ಶಬ್ದಗಳ ಸಂಕರದಿಂದ ಕೊಂಡನವೂರು ಪದಪ್ರಯೋಗ ಆಗಿ ನಂತರ ಬದಲಾವಣೆಗೊಂಡು ಈಗಿನ ಕೊಣ್ಣೂರು ರೂಪವನ್ನು ಪಡೆದಿರುವ ಸಾಧ್ಯತೆಗಳು ಹೆಚ್ಚಾಗಿವೆ. ಈ ಕೊಂಡ ಎಂಬ ಶಬ್ದವನ್ನು ಜನಾಂಗವಾಚಿಯಾಗಿ ನೋಡುವ ಸಾಧ್ಯತೆಗಳಿವೆ. ಆಂಧ್ರ ಮೂಲಗಳಿಂದ ಬಂದ ಕೊಂಡ ಜನಾಂಗ ಹಲವು ಶತಮಾನಗಳ ಹಿಂದೆಯೇ ಈ ಗ್ರಾಮದಲ್ಲಿ ವಾಸ ಮಾಡಿರುವ ಸಾಧ್ಯತೆಗಳಿದ್ದು, ಈ ಕೊಂಡ ಜನಾಂಗವು ಆಂಧ್ರದ ಭೇಟೆ ಮೂಲ ಸಂಸ್ಕೃತಿಯ ಬೇಡ ಜನಾಂಗದ ಇನ್ನೊಂದು ಪ್ರಬೇಧ. ಬಹುಶಃ ಹೆಚ್ಚಿನ ಸಂಖ್ಯೆಯಲ್ಲಿರುವ ಕೊಂಡ (ಬೇಡ) ಜನಾಂಗ ಸೂಚಿಯಾಗಿ ಈ ಊರಿಗೆ ಕೊಣ್ಣೂರಿನ ರೂಪಾಂತರ ಆಗಿರುವ ಸಾಧ್ಯತೆಗಳನ್ನು ಪರಿಶೀಲಿಸಬೇಕಾಗಿದೆ.

ಪ್ರಸ್ತುತ ಅಧ್ಯಯನಕ್ಕೆ ಆಯ್ದುಕೊಂಡಿರುವ ಕೊಣ್ಣೂರು ಪರಿಸರವು ಇಂದಿನ ಗೋಕಾಕ್ ತಾಲೂಕಿನ ಪಶ್ಚಿಮ ಮತ್ತು ನೈರುತ್ಯ ಹಾಗೂ ಹುಕ್ಕೇರಿ ತಾಲೂಕಿನ ಪೂರ್ವ ಹಾಗೂ ದಕ್ಷಿಣದ ಭಾಗಗಳಲ್ಲಿ ಹರಡಿಕೊಂಡಿದೆ. ಈ ಪ್ರದೇಶದಲ್ಲಿ ಘಟಪ್ರಭಾ, ಹಿರಣ್ಯಕೇಶಿ ಮತ್ತು ಮಾರ್ಕಂಡೇಯ ನದಿಗಳು ಹರಿದಿದ್ದು, ಈ ನದಿಗಳ ನಡುವಿನ ಪ್ರದೇಶದಲ್ಲಿರುವ ಗ್ರಾಮಗಳನ್ನು ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದೆ. ಘಟಪ್ರಭಾ ಮತ್ತು ಹಿರಣ್ಯಕೇಶಿ ನದಿಗಳು ಈ ಪರಿಸರದ ಉತ್ತರಭಾಗದಲ್ಲಿ ಹರಿದಿದ್ದರೆ, ಮಾರ್ಕಂಡೇಯ ನದಿಯು ದಕ್ಷಿಣ ಭಾಗದಲ್ಲಿ ಹರಿದಿದೆ. ಪೂರ್ವಾಭಿಮುಖವಾಗಿ ಹರಿಯುವ ಈ ಎಲ್ಲಾ ನದಿಗಳು ನೈಸರ್ಗಿಕ ಜಲಪಾತ(ಧಬೆಧಭೆ)ಗಳನ್ನು ನಿರ್ಮಾಣ ಮಾಡಿವೆ. ಉದಾಹರಣೆಗೆ, ಘಟಪ್ರಭಾ ನದಿಯು ಗೋಕಾಕ್ ನಗರದಿಂದ ೭ ಕಿ.ಮೀ ದೂರದಲ್ಲಿ ಸುಪ್ರಸಿದ್ಧವಾದ ಜಲಪಾತವನ್ನು ಸೃಷ್ಟಿಸಿದೆ. ಅದೇ ರೀತಿ ಚಿಕ್ಕ ಜಲಪಾತವನ್ನು ಮಾರ್ಕಂಡೇಯ ನದಿಯು, ಗೊಡಚಿನಮಲ್ಕಿ ಎಂಬ

ಗ್ರಾಮದಿಂದ ಸುಮಾರು ಎರಡು ಕಿ.ಮೀ ಅಂತರದಲ್ಲಿ ಸುಂದರವಾದ ಜಲಪಾತ (ದಭೆದಭೆ ಅಥವಾ ತಡಸಲು)ವನ್ನು ನಿರ್ಮಿಸಿದೆ. ಈ ಎರಡೂ ಜಲಪಾತಗಳು ಇಂದು ಸುಪ್ರಸಿದ್ಧವಾದ ಪ್ರವಾಸಿ ತಾಣಗಳಾಗಿವೆ. ಗುಡ್ಡ-ಬೆಟ್ಟ ಹಾಗೂ ಕೆಲವು ಕಡೆ ಸಮತಟ್ಟ ಪ್ರದೇಶದಿಂದಾವೃತವಾದ ಈ ನಾಡು ಕಪ್ಪು ಹಾಗೂ ಕೆಂಪು ಮಣ್ಣಿನಿಂದ ಆವರಿಸಲ್ಪಟ್ಟು, ಕೃಷಿ ಹಾಗೂ ಕೈಗಾರಿಕಾ ಚಟುವಟಿಕೆಗಳಿಗೆ ಸಹಾಯಕವಾಗಿದೆ.

**ಅಧ್ಯಯನದ ಉದ್ದೇಶ :**

ಕೊಣ್ಣೂರು ಪರಿಸರದಲ್ಲಿ ಲಕ್ಷಾಂತರ ವರ್ಷಗಳಿಂದಲೂ ಮಾನವನು ತನ್ನ ಚಟುವಟಿಕೆಗಳನ್ನು ನಿರ್ವಹಿಸುವ ಕುರುಹುಗಳನ್ನು ಕಾಣಬಹುದಾಗಿದೆ. ಇಂತಹ ಅವಶೇಷಗಳನ್ನು ಮುಖ್ಯವಾಗಿ ಇಲ್ಲಿ ಹರಿದಿರುವ ನದಿ ಪರಿಸರದಲ್ಲಿ ಕಾಣುತ್ತೇವೆ. ಸಿಕ್ಕಿರುವ ಅವಶೇಷಗಳನ್ನು ಗಮನಿಸಿ ಹೇಳುವುದಾದರೆ ಪ್ರದೇಶದ ಸಾಂಸ್ಕೃತಿಕ ಪ್ರಗತಿಯ ಮೇಲಾದ ಪ್ರಭಾವವನ್ನು ತಿಳಿಯಬಹುದು. ಶಿಲಾಯುಗ ಹಾಗೂ ಚಾರಿತ್ರಿಕ ಕಾಲಘಟ್ಟದಲ್ಲಿ ಮಹತ್ವದ ಪಾತ್ರವಹಿಸಿದ ಅನೇಕ ನೆಲೆಗಳು ಈ ಪ್ರದೇಶದಲ್ಲಿವೆ. ಉದಾಹರಣೆಗೆ, ಕೊಣ್ಣೂರು, ಗೊಡಚಿನಮಲ್ಕಿ, ಗುಮಚಿನಮರಡಿ, ಪಾಚ್ಛಾಪೂರ, ಮಾವನೂರು, ಕುಂದರಗಿ, ಘೋಡಗೇರಿ, ಸಾವಳಗಿ, ಅರಭಾವಿ, ಶಿಂದಿಕುರುಬೆಟ್ಟ, ಮಮದಾಪುರ, ನಂದಿ, ಶೀಗಿಹಳ್ಳಿ, ಗೋಕಾಕ್ ಮತ್ತು ಲೋಳಸೂರ ಮುಂತಾದ ಸ್ಥಳಗಳು ಎಲ್ಲಾ ಕಾಲಕ್ಕೂ ಒಂದಿಲ್ಲ ಒಂದು ರೀತಿಯಲ್ಲಿ ವೈವಿಧ್ಯತೆಯನ್ನು ಒಳಗೊಂಡಿರುವ ಬಗೆಗೆ ಮಾಹಿತಿಗಳಿವೆ. ಪ್ರಾಗೈತಿಹಾಸ ಕಾಲದಿಂದಲೂ ಮಾನವನ ಸಂಸ್ಕೃತಿಗೆ ಸಂಬಂಧಿಸಿದ ಅನೇಕ ಕುರುಹುಗಳು ಈ ಪರಿಸರದಲ್ಲಿ ಲಭ್ಯವಾಗಿವೆ. ಇವುಗಳ ಬಗೆಗೆ ಕೆಲವು ವರದಿಗಳು ಪ್ರಕಟವಾಗಿದ್ದು, ಅವುಗಳಲ್ಲಿ ಕೆಲವೇ ಕೆಲವು ನೆಲೆಗಳನ್ನು ಮಾತ್ರ ಕೇಂದ್ರೀಕರಿಸಿಕೊಳ್ಳಲಾಗಿದೆ. ಉದಾಹರಣೆಗೆ, ಓಡ್ಕಲ್ ಹಾಗೂ ಕೊಣ್ಣೂರು ಗ್ರಾಮಗಳಲ್ಲಿರುವ ಬೃಹತ್ ಶಿಲಾಯುಗ ಸಂಸ್ಕೃತಿ ಕರುಹುಗಳನ್ನು ಕುರಿತು ಹೆಚ್ಚಿನ ಒತ್ತು ನೀಡಲಾಗಿದೆ. ಆದರೆ ಬೇರೆ ಬೇರೆ ಸಂಸ್ಕೃತಿಯ ಕುರುಹುಗಳನ್ನು ಹೊಂದಿರುವ ಹಲವು ನೆಲೆಗಳು ಈ ಪರಿಸರದಲ್ಲಿವೆ. ಅವನ್ನು ಶೋಧಿಸುವ ಹಾಗೂ ವಿಶ್ಲೇಷಿಸುವ ಕಾರ್ಯ ಮಾಡಲಾಗುವುದು. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕೆಲ ಹೊಸ ನೆಲೆಗಳನ್ನು ಹುಡುಕಲಾಗಿದೆ. ಈಗಾಗಲೇ ನಡೆದಿರುವ ಕಾರ್ಯಗಳನ್ನು ಗಮನದಲ್ಲಿರಿಸಿಕೊಂಡು ಅವನ್ನು ವಿಸ್ತರಿಸುವ ಅಧ್ಯಯನವನ್ನು ಕೈಗೊಳ್ಳಲಾಗುವುದು. ಹಾಗೂ ಅವನ್ನು ಒಂದು ಶಿಸ್ತುಬದ್ಧ ಅಧ್ಯಯನದ ಚೌಕಟ್ಟಿಗೆ ಒಳಪಡಿಸಿ ಅರಿತುಕೊಳ್ಳುವ ಅವಶ್ಯಕತೆ ಹಿನ್ನೆಲೆಯಲ್ಲಿ ಅಧ್ಯಯನ ಕೈಗೊಳ್ಳಲಾಗುವುದು.

ಕೊಣ್ಣೂರು ಪರಿಸರದಲ್ಲಿನ ಬೃಹತ್ ಶಿಲಾಯುಗ ಕಾಲಾವಧಿಗೆ ಸಂಬಂಧಿಸಿದ ಅತಿ ಮಹತ್ವದ ಕುರುಹುಗಳನ್ನು ಕುರಿತು ವಿದ್ವಾಂಸರು ತಮ್ಮ ತಮ್ಮ ಅಭಿಪ್ರಾಯಗಳನ್ನು ಪ್ರಕಟಿಸಿದ್ದಾರೆ. ಅವರು ಕೈಗೊಂಡಿರುವ ಅಧ್ಯಯನಗಳು ಕೇವಲ ಕೊಣ್ಣೂರು, ಓಡ್ಕಲ್ ನೆಲೆಗಳನ್ನು ಮಾತ್ರ ಕೇಂದ್ರೀಕರಿಸಿಕೊಂಡು ನಡೆದಿರುವಂತಹವು. ಇದೇ ಬಗೆಯ ಕುರುಹುಗಳು ಈ ಪರಿಸರದ ಅನೇಕ ಬೇರೆ ಬೇರೆ ಸ್ಥಳಗಳಲ್ಲಿ ವಿಸ್ತರಿಸಿಕೊಂಡಿದ್ದು ಅವನ್ನು ಪತ್ತೆ ಹಚ್ಚುವ ಹಾಗೂ ವಿಶ್ಲೇಷಣಾತ್ಮಕ ಅಧ್ಯಯನಕ್ಕೆ ಒಳಪಡಿಸುವ

ಕಾರ್ಯ ಮಾಡಬೇಕಾಗಿದೆ. ಅಂತಹ ಪ್ರಯತ್ನಗಳ ನಿಟ್ಟಿನಲ್ಲಿ ಇಲ್ಲಿರುವ ನೆಲೆಗಳ ಬಗೆಗೆ ಈಗಾಗಲೇ ಕೈಗೊಂಡ ಅಧ್ಯಯನಗಳ ವಿಸ್ತರಣೆ ಹಾಗೂ ಸಾಧ್ಯತೆಗಳ ಕುರಿತು ಹೆಚ್ಚಿನ ಗಮನ ಹರಿಸಬೇಕಾದ ಅವಶ್ಯಕತೆ ಇದೆ.

ಈ ಪರಿಸರದ ಚಾರಿತ್ರಿಕ ಕಾಲಘಟ್ಟವನ್ನು ಕುರಿತಂತೆ ಹಲವು ಬಿಡಿ ವಿವರಗಳು ಪ್ರಕಟವಾಗಿವೆ. ಅಂತಹ ಪ್ರಕಟಣೆಗಳು ಸಾಹಿತ್ಯದ ಅಧ್ಯಯನಾಸಕ್ತಿಯ ಹಿನ್ನೆಲೆಯಲ್ಲಿ ನಡೆದಿರುವಂತಹವು. ದೇವಾಲಯ ಮತ್ತು ಇತರ ಅವಶೇಷಗಳ ಬಗೆಗೂ ಒಂದೆರಡು ಸಣ್ಣ ವಿವರಗಳು ಪ್ರಕಟವಾಗಿದ್ದನ್ನು ಹೊರತು ಪಡಿಸಿದರೆ ಸಮಗ್ರ ಹಾಗೂ ಸೂಕ್ಷ್ಮ ನೆಲೆಯಲ್ಲಿ ಅಧ್ಯಯನಗಳು ನಡೆದಿರುವುದು ಅತ್ಯಂತ ಕಡಿಮೆ ಎಂದು ಹೇಳಬಹುದು. ಇಂತಹ ಕೊರತೆಯನ್ನು ತುಂಬಿಕೊಡುವ ನಿಟ್ಟಿನಲ್ಲಿ ಚಾರಿತ್ರಿಕ ಕಾಲಘಟ್ಟದ ಶಾಸನ ವಿವರಗಳು ಹಾಗೂ ಈ ಪರಿಸರದಲ್ಲಿ ಕಂಡುಬರುವ ಎಲ್ಲಾ ಬಗೆಯ ಅವಶೇಷಗಳನ್ನು ವಿವರಿಸುವ ಹಾಗೂ ಸಾಂಸ್ಕೃತಿಕ ನೆಲೆಯಲ್ಲಿ ಅವನ್ನು ಮರುರೂಪಿಸುವ ಪ್ರಯತ್ನ ಮಾಡಲಾಗುವುದು. ಹಿಂದೆ ನಡೆದಿರುವ ಅಧ್ಯಯನಗಳನ್ನು ಗಮನದಲ್ಲಿರಿಸಿಕೊಂಡು ಅಧ್ಯಯನವನ್ನು ವಿಸ್ತರಿಸುವ ಉದ್ದೇಶ ಈ ಅಧ್ಯಯನದ್ದಾಗಿದೆ.

ಈ ಪರಿಸರದಲ್ಲಿನ ಪ್ರಾಚೀನ ಇತಿಹಾಸ ಮತ್ತು ಸಾಂಸ್ಕೃತಿಕ ಸಂಗತಿಗಳನ್ನು ಕಟ್ಟಿಕೊಡುವ ಮಹತ್ವದ ಆಕರಗಳಾದ ದೇವಾಲಯಗಳು ಹಾಗೂ ಅವುಗಳಿಗೆ ಸಂಬಂಧಿಸಿದ ಬೇರೆ ಬೇರೆ ಸಂಗತಿಗಳು ಸಾಕಷ್ಟಿವೆ. ಜೊತೆಗೆ .ಇಲ್ಲಿನ ದೇವಾಲಯಗಳು, ವಾಸ್ತುಶಿಲ್ಪಗಳ ಅಧ್ಯಯನಕ್ಕೆ ಹೊಸ ಬಗೆಯ ವಿಷಯಗಳನ್ನು ಜೋಡಿಸುವ ಮಹತ್ವದ ಕುರುಹುಗಳಾಗಿವೆ. ರಾಷ್ಟ್ರಕೂಟ ಹಾಗೂ ಕಲ್ಯಾಣ ಚಾಲುಕ್ಯರ ಸಾಮಂತರಾದ ಸೌಂದತ್ತಿಯ ರಟ್ಟರ ಕಾಲದಲ್ಲಿ ಇಲ್ಲಿ ನಿರ್ಮಾಣಗೊಂಡ ದೇವಾಲಯಗಳನ್ನು ಕುರಿತು ನಡೆದ ಅಧ್ಯಯನಗಳು ಅತ್ಯಂತ ವಿರಳ. ಅಂತಹ ಮಹತ್ವದ ಸ್ಮಾರಕಗಳು ಹಾಗೂ ಇತರ ಅವಶೇಷಗಳನ್ನು ಕೇಂದ್ರೀಕರಿಸುವ ಹಾಗೂ ವಿಶ್ಲೇಷಿಸುವ ಕಾರ್ಯ ಮಾಡಲಾಗುವುದು.

ಈ ಪ್ರದೇಶದಲ್ಲಿರುವ ಹಲವಾರು ದೇವಾಲಯಗಳು ಪ್ರಾಚೀನ ಸಂಸ್ಕೃತಿಯ ಪ್ರತೀಕಗಳಾಗಿವೆ. ಅವು ಕೇವಲ ಧಾರ್ಮಿಕ ಆರಾಧನಾ ಕೇಂದ್ರಗಳಾಗಿರದೆ, ಅಂದಿನ ಕಾಲದ ಸಮಾಜೋ - ಧಾರ್ಮಿಕ (Socio - Religious) ಚಟುವಟಿಕೆಗಳನ್ನು ನಿರ್ವಹಿಸಿರುವ ಪ್ರಮುಖ ಸಂಪರ್ಕ ಮಾಧ್ಯಮಗಳಾಗಿದ್ದವು. ಇವುಗಳಲ್ಲಿ ವಾಸ್ತುಶಿಲ್ಪ ಹಾಗೂ ಮೂರ್ತಿಶಿಲ್ಪಗಳು ಈ ಭಾಗದ ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತವೆನ್ನುವುದರಲ್ಲಿ ಯಾವ ಸಂಶಯವಿಲ್ಲ. ಇಂತಹ ವಿಷಯಗಳನ್ನು ಅವಶ್ಯಕತೆಗೆ ತಕ್ಕಂತೆ ವಿವೇಚಿಸುವ ಪ್ರಯತ್ನ ಮಾಡಲಾಗುವುದು.

ಒಟ್ಟಿನಲ್ಲಿ ಕರ್ನಾಟಕದ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ಕ್ಷೇತ್ರಗಳಲ್ಲಿ ಉಪೇಕ್ಷೆಗೆ ಒಳಗಾಗಿರುವ ಈ ಪರಿಸರವನ್ನು ವಿವರಣಾತ್ಮಕ ಹಾಗೂ ವಿಶ್ಲೇಷಣಾತ್ಮಕ ಅಧ್ಯಯನಗಳಿಗೆ ಒಳಪಡಿಸುವ ಮೂಲಕ ಇಲ್ಲಿನ ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಿಕೊಡುವ ಹಾಗೂ ಪುರಾತತ್ವ ಹಿನ್ನೆಲೆಯಲ್ಲಿ

ಶಿಲಾಯುಗದ ನೆಲೆಗಳನ್ನು ಹುಡುಕುವ ಮತ್ತು ಚಾರಿತ್ರಿಕ ಸಂದರ್ಭಗಳಲ್ಲಿ ನಿರ್ಮಾಣವಾದ ಎಲ್ಲ ಬಗೆಯ ಸ್ಮಾರಕಗಳ ಕುರಿತು ಅಧ್ಯಯನ ಮಾಡುವ ಬಹು ಮುಖ್ಯ ಉದ್ದೇಶವನ್ನಿಟ್ಟುಕೊಂಡು ಪ್ರಸ್ತುತ ಕಾರ್ಯವನ್ನು ಕೈಗೊಳ್ಳಲಾಗಿದೆ.

**ಅಧ್ಯಯನದ ವ್ಯಾಪ್ತಿ :**

ಕೊಣ್ಣೂರು ಪರಿಸರದ ಸುತ್ತಮುತ್ತಲಿನ ಪ್ರದೇಶಗಳನ್ನು ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದ್ದು, ಅಧ್ಯಯನದ ವ್ಯಾಪ್ತಿಯು ಈ ಪ್ರದೇಶದಲ್ಲಿ ಹರಡಿರುವ ಪ್ರಮುಖ ನದಿಗಳಾದ ಘಟಪ್ರಭಾ, ಹಿರಣ್ಯಕೇಶಿ ಹಾಗೂ ಮಾರ್ಕಂಡೇಯ ನದಿಗಳ ಪ್ರದೇಶಕ್ಕೆ ಸೀಮಿತಗೊಳಿಸಿಕೊಳ್ಳಲಾಗಿದೆ. ಭೌಗೋಳಿಕವಾಗಿ ಇಂದು ಈ ಪರಿಸರವನ್ನು ಎರಡು ತಾಲೂಕುಗಳ ಪ್ರದೇಶಗಳಲ್ಲಿ ಗುರುತಿಸಿಕೊಳ್ಳಲಾಗುವುದು. ಅಂದರೆ ಹುಕ್ಕೇರಿ, ಗೋಕಾಕ್ ತಾಲೂಕುಗಳ ಕೆಲ ಭಾಗಗಳು ಈ ಪರಿಸರ ವ್ಯಾಪ್ತಿಯಲ್ಲಿ ಬರುತ್ತವೆ. ಪ್ರಮುಖವಾಗಿ ಕೊಣ್ಣೂರು, ಗೋಕಾಕ್, ಲೋಳಸೂರ, ಅರಭಾವಿ, ಸಾವಳಗಿ, ಘೋಡಗೇರಿ, ಹಿಡಕಲ್ ಅಣೆಕಟ್ಟು, ಗುಮಚನಮರಡಿ, ನಿರ್ವಾಣಹಟ್ಟಿ, ಪಾಶ್ಚಾಪೂರ, ಮಾವನೂರು, ಕುಂದರಗಿ, ಗೊಡಚಿನಮಲ್ಕಿ ಮುಂತಾದ ಗ್ರಾಮಗಳ ಪರಿಸರವು ಈ ಅಧ್ಯನಯದ ವ್ಯಾಪ್ತಿಯಲ್ಲಿ ಬರುತ್ತವೆ. ಅಧ್ಯಯನದ ಅನುಕೂಲಕತೆಯ ಹಿನ್ನೆಲೆಯಲ್ಲಿ ಕಾಲಾವಧಿಯನ್ನು ಸಹ ಮಿತಿಗೊಳಿಸಿಕೊಳ್ಳಲಾಗಿದೆ. ಪ್ರಸ್ತುತ ಅಧ್ಯಯನವನ್ನು ವಿಜಯನಗರದ ಆಡಳಿತಾವಧಿಯ ಕೊನೆಯ ಕಾಲಘಟ್ಟಕ್ಕೆ ಸೀಮಿತಗೊಳಿಸಲಾಗಿದ್ದು ಈ ಕಾಲದ ನಂತರದ ಕೆಲವು ಮಹತ್ವದ ವಿಚಾರಗಳನ್ನು ಸಂದರ್ಭೋಚಿವಾಗಿ ಪರಿಗಣಿಸಲಾಗಿದೆ. ಪರಿಸರ ಮತ್ತು ಪುರಾತತ್ವ ಹಿನ್ನೆಲೆಯ ಈ ಅಧ್ಯಯನವು ಪ್ರಾಗೈತಿಹಾಸದ ನೆಲೆಗಳು ಹಾಗೂ ಅವುಗಳ ವಿವರ, ಸಾಂಸ್ಕೃತಿಕ ಸಂಬಂಧಗಳ ಮಹತ್ವ, ಪುರಾತತ್ವ ಮೂಲಾಧಾರಗಳಾದ ದೇವಾಲಯ, ಮೂರ್ತಿಶಿಲ್ಪ, ಶಾಸನಗಳಿಗೆ ಹೆಚ್ಚಿನ ಪ್ರಾಮುಖ್ಯತೆ ನೀಡಲಾಗುವುದು.

ಕೈಗೊಳ್ಳುವ ಅಧ್ಯಯನದ ವಿಷಯ ವ್ಯಾಪ್ತಿಯನ್ನು ಐದು ಪ್ರಮುಖ ಅಧ್ಯಾಯಗಳಿಗೆ ಮಿತಿಗೊಳಿಸಿಕೊಳ್ಳಲಾಗಿದೆ. ಮೊದಲ ಅಧ್ಯಾಯದಲ್ಲಿ ಪ್ರಸ್ತುತ ಅಧ್ಯಯನದ ಪ್ರಸ್ತಾವನೆ, ಉದ್ದೇಶ, ವ್ಯಾಪ್ತಿ, ವಿಧಾನ ಹಾಗೂ ಈ ಪರಿಸರಕ್ಕೆ ಸಂಬಂಧಿಸಿದಂತೆ ಈ ಹಿಂದೆ ಕೈಗೊಂಡಿರುವ ಅಧ್ಯಯನದ ವಿವರಗಳ ಬಗೆಗೆ ವಿವರಿಸಲಾಗುವುದು. ಎರಡನೆಯ ಅಧ್ಯಾಯದಲ್ಲಿ ಕೊಣ್ಣೂರು ಪರಿಸರದ ಭೌಗೋಳಿಕ ಸನ್ನಿವೇಶಗಳ ಕುರಿತು ಸಂಕ್ಷಿಪ್ತ ವಿವರ ನೀಡುವ ಹಾಗೂ ಪರಿಸರದಲ್ಲಿ ಕೇಂದ್ರೀಕೃತಗೊಂಡ ಪುರಾತತ್ವ ಸಂಸ್ಕೃತಿಯನ್ನು ಹೊಂದಿರುವ ನೆಲೆಗಳನ್ನು ಕ್ಷೇತ್ರಕಾರ್ಯ ಸಂದರ್ಭದಲ್ಲಿ ಕಂಡುಕೊಳ್ಳುವ ಹಾಗೂ ಹೊಸ ನೆಲೆಗಳನ್ನು ಕುರಿತು ವಿವೇಚಿಸುವ ಪ್ರಯತ್ನ ಮಾಡಲಾಗುವುದು. ಮೂರನೆಯ ಅಧ್ಯಾಯದಲ್ಲಿ ಕೊಣ್ಣೂರು ಪರಿಸರಕ್ಕೆ ಸಂಬಂಧಿಸಿದ ಆಕರಗಳನ್ನು ಇಟ್ಟುಕೊಂಡು ಸಂಕ್ಷಿಪ್ತವಾದ ಚರಿತ್ರೆಯನ್ನು ಕಟ್ಟಿಕೊಳ್ಳಲಾಗುವುದು. ಈ ವಿಷಯವು ಪುರಾತತ್ವ ಸ್ಮಾರಕ ಹಾಗೂ ತತ್ಸಂಬಂಧಿ ವಿಷಯಗಳಿಗೆ ಸಂಬಂಧಿಸಿದಂತೆ ರಚಿಸಿಕೊಳ್ಳಲಾಗುವುದು. ಅಧ್ಯಾಯ ನಾಲ್ಕರಲ್ಲಿ ಪ್ರತಿ ಗ್ರಾಮದಲ್ಲಿರುವ ಪುರಾತತ್ವ ಸಂಸ್ಕೃತಿಯ ಪ್ರಮುಖ

ಆಕರಗಳಾದ ದೇವಾಲಯ ಹಾಗೂ ಮೂರ್ತಿಶಿಲ್ಪಗಳ ವಿವರಗಳನ್ನು ಬರೆಯುವ ಮತ್ತು ವಿಶ್ಲೇಷಿಸುವ ಕಾರ್ಯವನ್ನು ಮಾಡಲಾಗುವುದು. ಅಧ್ಯಾಯ ಐದರಲ್ಲಿ ಕೊಣ್ಣೂರು ಪರಿಸರದ ಪುರಾತತ್ವ ಅಧ್ಯಯನದ ಸಂಕ್ಷಿಪ್ತ ಸಾರ ಹಾಗೂ ಕಂಡುಕೊಂಡ ಫಲಿತಗಳನ್ನು ಸಮಾರೋಪದಲ್ಲಿ ವಿವರಿಸಲಾಗುವುದು.

**ಹಿಂದೆ ನಡೆದಿರುವ ಅಧ್ಯಯನಗಳು :**

ಪ್ರಸ್ತುತ ಅಧ್ಯಯನಕ್ಕೆ ಆಯ್ದುಕೊಂಡಿರುವ ಪರಿಸರವನ್ನು ಕುರಿತು ಕೆಲವು ವಿದ್ವಾಂಸರು ಬಿಡಿ ವಿವರಗಳನ್ನು ನೀಡಿದ್ದಾರೆ. ಅವು ಪ್ರಕಟವಾಗಿವೆ. ಬರ್ಗೆಸ್‌ರವರು 'ರಿಪೋರ್ಟ್ ಆಫ್ ದಿ ಫಸ್ಟ್ ಸೀಸನ್ಸ್ ಇನ್ ದಿ ಬೆಳಗಾಂ ಆ್ಯಂಡ್ ಕಲಾದಗಿ ಡಿಸ್ಟ್ರಿಕ್ಟ್', ಹೆನ್ರಿ ಕಸಿನ್ಸ್ ಅವರು ಬರೆದಿರುವ 'ಚಾಲುಕ್ಯನ್ ಆರ್ಕಿಟೆಕ್ಚರ್ ಆಫ್ ಕೆನಾರಿಸ್ ಡಿಸ್ಟ್ರಿಕ್ಟ್ಸ್', 'ಆರ್ಕೆಯಾಲಜಿ ಆಫ್ ಕರ್ನಾಟಕ' ಎಂಬ ಜರ್ನಲ್‌ದಲ್ಲಿ ಡಾ.ಆರ್.ಎಸ್.ಪಪ್ಪುರವರು, "ಘಟಪ್ರಭಾ ನದಿ ಪರಿಸರದ ಪ್ರಾಚೀನ ಹವಮಾನದ" ಬಗ್ಗೆ ಲೇಖನಗಳನ್ನು ಬರೆದಿದ್ದಾರೆ. ಅದೇ ರೀತಿಯಾಗಿ ಪೂಣೆಯ ಡೆಕ್ಕನ್ ಕಾಲೇಜ್ ಪ್ರಕಟಿಸಿರುವ "ಮ್ಯಾನ್-ಲ್ಯಾಂಡ್ ರಿಲೇಷನ್‌ಶಿಪ್ಸ್ ಡ್ಯೂರಿಂಗ್ ಪೇಲಿಯೋಲಿಥಿಕ್ ಟೈಮ್ಸ್ ಇನ್ ಕಲಾದಗಿ ಬೇಸಿನ್"ದಲ್ಲಿ ಘಟಪ್ರಭಾ ಹಿರಣ್ಯಕೇಶಿ ಹಾಗೂ ಮಾರ್ಕಂಡೇಯ ನದಿ ಪರಿಸರದಲ್ಲಿನ ಶಿಲೆಗಳ ಸ್ವರೂಪ, ಮಣ್ಣು, ಹವಾಮಾನ ಹಾಗೂ ಈ ಭಾಗದಲ್ಲಿರುವ ಹಳೆಯ ಶಿಲಾಯುಗದ ಕಾಲದ ನೆಲೆಗಳನ್ನು ಕುರಿತು ಡಾ.ಆರ್.ಎಸ್.ಪಪ್ಪು ಹಾಗೂ ಎಸ್.ಬಿ.ದೇವ್‌ರವರು ಮಾಹಿತಿ ನೀಡಿರುವರು. ಜೇಮ್ಸ್ ಕ್ಯಾಂಬೆಲ್ ಹಾಗೂ ಸೂರ್ಯನಾಥ ಕಾಮತರ ಸಂಪಾದಕತ್ವದಲ್ಲಿ ಪ್ರಕಟಗೊಂಡಿರುವ ಬೆಳಗಾವಿ ಜಿಲ್ಲಾ ಗೆಜೆಟೀಯರ್‌ಗಳಲ್ಲಿ ಕೂಡ ಈ ಪರಿಸರದ ಸಂಸ್ಕೃತಿಯನ್ನು ಕುರಿತು ಸ್ವಲ್ಪಮಟ್ಟಿಗೆ ವಿವರಿಸುವ ಪ್ರಯತ್ನ ಮಾಡಿದ್ದಾರೆ. ವಿದ್ವಾಂಸರಾದ ಅ.ಸುಂದರರವರು 'ಅರ್ಲಿಚಂಬರ್ ಟಾಂಬ್ಸ್ ಆಫ್ ಸೌಥ್ ಇಂಡಿಯಾ'ದಲ್ಲಿ ಹುಕ್ಕೇರಿ ಹಾಗೂ ಗೋಕಾಕ್ ತಾಲೂಕಿನ ಬೃಹತ್ ಶಿಲಾಸಂಸ್ಕೃತಿಗೆ ಸಂಬಂಧಿಸಿದ ಕೆಲವು ಕುರುಹುಗಳನ್ನು ಪತ್ತೆ ಹಚ್ಚಿ, ಅವುಗಳ ಮಹತ್ವವನ್ನು ವಿವರಿಸುವ ಪ್ರಯತ್ನವನ್ನು ಮಾಡಿದ್ದಾರೆ. ಆದರೆ ಇಂಥ ವಿಸ್ತಾರವಾದ ವಿಷಯದ ಹಿನ್ನೆಲೆಯಲ್ಲಿ ಕೇವಲ ಕೊಣ್ಣೂರು ಗ್ರಾಮದ ಅವಶೇಷಗಳನ್ನು ಆಂಶಿಕವಾಗಿ ಪರಿಗಣಿಸಿ ಬಳಸಿಕೆಂಡಿದ್ದಾರೆ. ಪ್ರಸ್ತುತ ಕೈಗೊಳ್ಳುವ ಅಧ್ಯಯನವು ಈ ಪರಿಸರದ ಎಲ್ಲಾ ಗ್ರಾಮಗಳನ್ನು ಪರಿಶೀಲಿಸುವ ಹಾಗೂ ಸಮಗ್ರತೆಯನ್ನು ತಂದುಕೊಳ್ಳುವ ನಿಟ್ಟಿನಲ್ಲಿ ಅಧ್ಯಯನ ಮಾಡಲಾಗುವುದು. ಪಿ.ಬಿ.ದೇಸಾಯಿಯವರ "ಜೈನಿಸಂ ಇನ್ ಸೌಥ್ ಇಂಡಿಯಾ ಅಂಡ್ ಸಮ್ ಜೈನ ಎಪಿಗ್ರಾಫ್ಸ್"ದಲ್ಲಿ ಈ ಭಾಗದ ಜೈನಧರ್ಮದ ಬಗ್ಗೆ ಉಲ್ಲೇಖಿಸಿದ್ದಾರೆ. ಢಾಕೆಯವರ 'ಚಾಲುಕ್ಯನ್ ಆರ್ಕಿಟೆಕ್ಚರ್' ಸಂಪುಟಗಳಲ್ಲಿ ಗೋಕಾಕ್ ಜಲಪಾತ ಹಾಗೂ ಕೊಣ್ಣೂರು ಪರಿಸರದಲ್ಲಿನ ಕೆಲವು ದೇವಾಲಯಗಳನ್ನು ಕುರಿತು ಚರ್ಚಿಸಿದ್ದಾರೆ. ಎಸ್.ಬಿ.ಪಾಟೀಲರ 'ರಟ್ಟರ ಕಾಲದ ಸಾಂಸ್ಕೃತಿಕ ಅಧ್ಯಯನ' ಎಂಬ ಅಪ್ರಕಟಿತ ಪಿಎಚ್.ಡಿ ಪ್ರಬಂಧದಲ್ಲಿ ಈ ಪರಿಸರದಲ್ಲಿನ ಗೋಕಾಕ್ ಜಲಪಾತದ ಬಳಿಯ ದೇವಾಲಯಗಳನ್ನು ಮಾತ್ರ ಗಣನೆಗೆ ತೆಗೆದುಕೊಂಡಿದ್ದಾರೆ. ಅಲ್ಲದೆ ಈ ಅಧ್ಯಯನವು ಐತಿಹಾಸಿಕ ಹಾಗೂ ವಾಸ್ತುಶಿಲ್ಪದ ಅಧ್ಯಯನಗಳ ಹಿನ್ನೆಲೆಯಲ್ಲಿ ನಡೆದಿರುವಂತಹದ್ದಲ್ಲ.

ಬೆಳಗಾವಿಯಲ್ಲಿ ನಡೆದ ೭೦ನೆಯ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಪ್ರಕಟಗೊಂಡ "ಬೆಳಗಾವಿ ಬೆಳಕು", ಆರ್.ಆರ್.ಮುತಾಲಿಕ್ ಅವರ "ಹುಕ್ಕೇರಿ ತಾಲೂಕು ದರ್ಶನ", ಗೋಕಾಕದ ಕ್ರಿಯಾಶೀಲ ಸಾಹಿತ್ಯ ಹಾಗೂ ಸಾಂಸ್ಕೃತಿಕ ವೇದಿಕೆಯ "ಗೋಕಾವಿ ಸಿರಿಸಂಪದ" ಸ್ಮರಣ ಸಂಚಿಕೆಯಲ್ಲಿ ಕೂಡ ಈ ಭಾಗದ ಕೆಲ ಮಾಹಿತಿಗಳನ್ನು ನೀಡಲಾಗಿದೆ. ಇವುಗಳ ಜೊತೆಗೆ ಎಫಿಗ್ರಾಫಿಯ ಇಂಡಿಕ, ಕರ್ನಾಟಕ ಇನ್ಸ್‌ಕ್ರಿಪ್ಷನ್ಸ್, ಸೌಥ್ ಇಂಡಿಯನ್ ಇನ್ಸ್‌ಕ್ರಿಪ್ಷನ್ಸ್, ಇಂಡಿಯನ್ ಆ್ಯಂಟಿಕ್ವೇರಿ, ಇಂಡಿಯನ್ ಆರ್ಕೆಯಾಲಜಿಕಲ್ ರಿವ್ಯೂವ್, ಕರ್ನಾಟಕ ಇನ್ಸ್‌ಪ್ಷನ್ಸ್‌ಗಳಲ್ಲಿ ಈ ಭಾಗದ ಶಾಸನ ಹಾಗೂ ಇನ್ನಿತರ ಮಾಹಿತಿಗಳನ್ನು ನೀಡಲಾಗಿದೆ. ಆದರೆ ಈ ಹಿಂದೆ ಉಲ್ಲೇಖಿಸಿದ ಬಿಡಿ ಲೇಖನಗಳು ಹಾಗೂ ಗ್ರಂಥಗಳ ವ್ಯಾಪ್ತಿ ವಿಸ್ತಾರವಾಗಿರುವುದರಿಂದ ಕೈಗೊಂಡಿರುವ ಪ್ರಸ್ತುತ ಅಧ್ಯಯನದ ಪರಿಸರ ಕುರಿತಂತೆ ಸಮಗ್ರ ಹಾಗೂ ಸೂಕ್ಷ್ಮ ವಿವರಗಳನ್ನು ನೀಡಲಾಗಿಲ್ಲ. ಅಂಥ ಕೊರತೆಗಳನ್ನು ತುಂಬಿಕೊಳ್ಳುವ ನಿಟ್ಟಿನಲ್ಲಿ ಪ್ರಸ್ತು ಅಧ್ಯಯನವನ್ನು ಸೀಮಿತಗೊಳಿಸಿಕೊಂಡ ಪರಿಸರವನ್ನು ಸಾಧ್ಯವಾದ ಮಟ್ಟಿಗೆ ಸಮಗ್ರವಾಗಿ ವಿವರಿಸುವ ಹಾಗೂ ಸೂಕ್ಷ್ಮವಾಗಿ ಅವಲೋಕಿಸುವ ಪ್ರಯತ್ನ ಮಾಡಲಾಗುವುದು.

**ಅಧ್ಯಯನದ ವಿಧಾನ :**

ಪುರಾತತ್ವ ಹಿನ್ನೆಲೆಯನ್ನು ಇಟ್ಟುಕೊಂಡು ಕೈಗೊಂಡಿರುವ ಪ್ರಸ್ತುತ ಅಧ್ಯಯನವು ಕ್ಷೇತ್ರಕಾರ್ಯ ಆಧಾರಿತವಾಗಿವೆ. ಈ ಪ್ರದೇಶದ ಪ್ರತಿ ಗ್ರಾಮಗಳನ್ನು ಖುದ್ದಾಗಿ ಭೇಟಿ ನೀಡಿ ಅಲ್ಲಿನ ವಿವರಗಳನ್ನು ಪರಿಶೀಲಿಸಿ ದಾಖಲಿಸಿಕೊಳ್ಳಲಾಗುವುದು. ಹಾಗೂ ತತ್ಸಂಬಂಧಿ ಅಧ್ಯಯನಗಳನ್ನು ಗಮನದಲ್ಲಿರಿಸಿಕೊಂಡು ಪೂರಕವಾದ ಮಾಹಿತಿಗಳನ್ನು ಬೇರೆ ಬೇರೆ ನೆಲೆಯಿಂದಲೂ ಪಡೆಯಲಾಗುವುದು. ಸಂದರ್ಭದಲ್ಲಿ ಸ್ಥಳೀಯ ಸಂಘಸಂಸ್ಥೆಗಳು, ಹಾಗೂ ವ್ಯಕ್ತಿಗಳ ನೆರವನ್ನು ಪಡೆಯಲಾಗುವುದು. ಸ್ಥಳೀಯರ ಮಾಹಿತಿಯ ಸಹಾಯವಿಲ್ಲದೆ ಅಧ್ಯಯನ ಅಸಾಧ್ಯ. ಕ್ಷೇತ್ರದ ಕಾರ್ಯದಲ್ಲಿ ಕಂಡುಬರುವ ಹೊಸ ನೆಲೆಗಳನ್ನು ಹಾಗೂ ಅಲ್ಲಿ ಅವಶೇಷಗಳನ್ನು ಸಂಗ್ರಹಿಸಿ ಛಾಯಾಚಿತ್ರ ತೆಗೆಯಲಾಗುವುದು. ಇಂತಹ ಆಕರಗಳನ್ನು ಕಾಲಾನುಕ್ರಮದಲ್ಲಿ ವಿಂಗಡಿಸಿ, ವಿಮರ್ಶಿಸಿ, ವಿಶ್ಲೇಷಿಸಲಾಗುವುದು. ಪುರಾತತ್ವ ಇತಿಹಾಸ ಹಾಗೂ ಸಂಸ್ಕೃತಿ ಅಧ್ಯಯನಗಳಲ್ಲಿ ಚಾಲ್ತಿಯಲ್ಲಿರುವ ಅಧ್ಯಯನ ವಿಧಾನಗಳನ್ನು ಪರಿಗಣಿಸಿ ಅಧ್ಯಯನ ಪೂರೈಸುವ ಪ್ರಯತ್ನ ಮಾಡಲಾಗುವುದು.

**ಅಡಿಟಿಪ್ಪಣಿಗಳು**

೧. ಎಆರ್ಐ, ೧೯೫೨-೫೩, ಅಪೆಂಡಿಕ್ಸ್ ಬಿ, ನಂ.೫೧

೨. ನಾವಲಗಿ ಸಿ.ಕೆ, ಜೈನಕ್ಷೇತ್ರಗಳ ಐತಿಹ್ಯ, ಪು.೮೨-೮೪

# ಅಧ್ಯಾಯ ಎರಡು

## ಭೌಗೋಳಿಕ ಪರಿಸರ ಮತ್ತು ಪ್ರಾಗಿತಿಹಾಸ

### ಭೌಗೋಳಿಕ ಪರಿಸರ

ಈ ಅಧ್ಯಾಯದಲ್ಲಿ ಗೋಕಾಕ್ ಮತ್ತು ಹುಕ್ಕೇರಿ ತಾಲೂಕಿನ ಪ್ರದೇಶಗಳನ್ನು ಆಯ್ದುಕೊಳ್ಳಲಾಗಿದೆ. ಅಧ್ಯಯನದ ವ್ಯಾಪ್ತಿಯ ಮಿತಿ ಮತ್ತು ನಿರ್ದಿಷ್ಟತೆಯಿಂದ ಸಂಶೋಧನಾ ವಿಷಯದ ವ್ಯಾಪ್ತಿಯನ್ನು ಮಾರ್ಕಂಡೇಯ ನದಿ ಹಾಗೂ ಘಟಪ್ರಭಾ ಪರಿಸರಕ್ಕೆ ಸೀಮಿತಗೊಳಿಸಿಕೊಳ್ಳಲಾಗಿದೆ. ಈ ನದಿಗಳು ಬೆಳಗಾವಿ ತಾಲೂಕಿನಲ್ಲಿ ಹೆಚ್ಚಾಗಿ ಹರಿದು ಹುಕ್ಕೇರಿ ತಾಲೂಕಿನ ಆಗ್ನೇಯ ಭಾಗ ಹಾಗೂ ಗೋಕಾಕ ತಾಲೂಕಿನ ನೈರುತ್ಯ ಭಾಗಗಳಲ್ಲಿ ತಮ್ಮ ಸಾಂಸ್ಕೃತಿಕ ಪರಿಸರವನ್ನು ನಿರ್ಮಾಣ ಮಾಡಿವೆ. ಇದರಿಂದಾಗಿ ಈ ಎರಡೂ ತಾಲೂಕಿನ ಭೌಗೋಳಿಕ ಸನ್ನಿವೇಶಗಳನ್ನು ತಿಳಿಯುವುದು ಅವಶ್ಯಕವಾಗಿದೆ. ಯಾವುದೇ ಪ್ರದೇಶದ ಸಾಂಸ್ಕೃತಿಕ ಪ್ರಗತಿಯು ಅಲ್ಲಿನ ಭೌಗೋಳಿಕ ಪರಿಸರ ಮತ್ತು ನೈಸರ್ಗಿಕ ಸಂಪನ್ಮೂಲಗಳನ್ನು ಹೆಚ್ಚಾಗಿ ಅವಲಂಬಿಸಿರುತ್ತದೆ. ಪರಿಸರದಲ್ಲಾಗುವ ಬದಲಾವಣೆಗಳಿಗೆ ಹೊಂದಿಕೊಂಡು ಜೀವ ಸಂಕುಲಗಳು ತಮ್ಮನ್ನು ಅಭಿವೃದ್ಧಿಗೊಳಿಸಿಕೊಳ್ಳುತ್ತವೆ. ಇದಕ್ಕೆ ಮಾನವನು ಹೊರತಾಗಿಲ್ಲ. ಈ ಪರಿಸರದಲ್ಲೂ ಈ ಅಂಶ ಹೇರಳವಾಗಿ ಕಂಡುಬರುತ್ತದೆ. ಈ ಪರಿಸರದಲ್ಲಿ ವಾಸಿಸುತ್ತಿರುವ ಪ್ರಾಣಿಸಂಕುಲಗಳು ತಮ್ಮನ್ನು ಈ ಪರಿಸರಕ್ಕೆ ಸಜ್ಜುಗೊಳಿಸಿಕೊಂಡಿರುವುದನ್ನು ಅನೇಕ ಮೂಲಗಳಿಂದ ಗ್ರಹಿಸಬಹುದಾಗಿದೆ. ಈ ಪರಿಸರದ ಭೌಗೋಳಿಕ ಹಾಗೂ ಪ್ರಾಗಿತಿಹಾಸವನ್ನು ಕಾಲುವೆ, ಬೆಟ್ಟ, ಗುಡ್ಡ, ಕೊಳ್ಳದ ಪ್ರದೇಶ ಹಾಗೂ ಮಾನವ ಅವಲಂಬಿಸಿದ ಕೃಷಿ, ಪಶುಸಂಗೋಪನ ಅವನ ಆರ್ಥಿಕತೆಯ ಮೇಲೆ ಪರೋಕ್ಷವಾಗಿ ಪ್ರಭಾವ ಬೀರಿದ್ದನ್ನು ಅನಾದಿಕಾಲದಿಂದಲ್ಲೂ ಕಾಣಬಹುದಾಗಿದೆ.

### ಭೌಗೋಳಿಕ ಸ್ಥಾನ :

ಕೊಣ್ಣೂರು ಪರಿಸರವು ಘಟಪ್ರಭಾ, ಹಿರಣ್ಯಕೇಶಿ, ಮಾರ್ಕಂಡೇಯ ನದಿಗಳ ಸುತ್ತಮುತ್ತಲಿನ ಪ್ರದೇಶಗಳನ್ನು ಒಳಗೊಂಡಿದ್ದು, ಇದು ಗೋಕಾಕ್ ಮತ್ತು ಹುಕ್ಕೇರಿ ತಾಲೂಕುಗಳಲ್ಲಿ ವ್ಯಾಪಿಸಿದೆ.

ಈ ಎರಡೂ ತಾಲೂಕುಗಳು ಭೌಗೋಳಿಕವಾಗಿ ೧೫°೫೮ ಪೂರ್ವ ಅಕ್ಷಾಂಶದಿಂದ ೧೬°೨೧ ಪಶ್ಚಿಮ ಅಕ್ಷಾಂಶ ಮತ್ತು ೭೪°೧೯ ಉತ್ತರ ಅಕ್ಷಾಂಶದಿಂದ ೭೫°೧೬ ದಕ್ಷಿಣದ ರೇಖಾಂಶದವರೆಗೆ ವಿಸ್ತರಿಸಿವೆ.[೧] ಎರಡೂ ತಾಲೂಕುಗಳನ್ನು ಬೆಳಗಾವಿ ಜಿಲ್ಲೆಯ, ಬೆಳಗಾವಿ, ಸವದತ್ತಿ, ರಾಯಭಾಗ ಹಾಗೂ ರಾಮದುರ್ಗ ತಾಲೂಕುಗಳು ಅಲ್ಲದೇ ಬಾಗಲಕೋಟೆ ಜಿಲ್ಲೆಯ ಮುಧೋಳ ತಾಲೂಕು ಗೋಕಾಕ ತಾಲೂಕಿನ ಪೂರ್ವ ಭಾಗಕ್ಕೆ ಹೊಂದಿಕೊಂಡು ವ್ಯಾಪ್ತಿಸಿವೆ.

## ಭೂರಚನೆ (Geology) :

ಈ ಪರಿಸರದ ಶಿಲಾರಚನೆಯು ಕೋಟ್ಯಾಂತರ ವರ್ಷಗಳ ಹಿಂದೆ ಆಗಿರುವಂತಹವು. ಇಲ್ಲಿರುವ ಶಿಲಾರಚನೆಗಳ ಕುರಿತು ಈಗಾಗಲೇ ಕೆಲವರು ಅಧ್ಯಯವನ್ನು ಕೈಗೊಂಡಿದ್ದಾರೆ.[೨] ಘಟಪ್ರಭಾ ಹಾಗೂ ಅದರ ಉಪನದಿಗಳಾದ ಮಾರ್ಕಂಡೇಯ ಮತ್ತು ಹಿರಣ್ಯಕೇಶಿ ನದಿಗಳಿಂದಾದ ಕೊರಕಲು ಪ್ರದೇಶಗಳು ಹಾಗೂ ಕಣಿವೆಗಳ ಅಧ್ಯಯನದಿಂದ ಈ ಭಾಗದ ಶಿಲಾರಚನೆ ಹಾಗೂ ಸ್ವರೂಪವನ್ನು ಅರಿಯಲು ಸಹಾಯಕವಾಗಿದೆ. ಇಲ್ಲಿ ಆರ್ಕೆಯನ್, ಕಲಾದಗಿ, ಡೆಕ್ಕನ್ ಟ್ರಾಪ್ ಮತ್ತು ಚತುರ್ಥಯುಗದ ಶಿಲೆಗಳು ಕಂಡುಬರುತ್ತವೆ.[೩]

ಆರ್ಕೆಯನ್ ಶಿಲೆಗಳು (ಭೂಗರ್ಭ ಇತಿಹಾಸದ ಪ್ರಥಮ ಯುಗ) ೧.೭ ಬಿಲಿಯನ್ ವರ್ಷಗಳಿಂದ ಹಿಡಿದು ೫೦೦ ಮಿಲಿಯನ್ ವರ್ಷಗಳ ಅವಧಿಯಲ್ಲಿ ಪ್ರೋಟೊಜೊಯಿಕ್ ಯುಗದಲ್ಲಿ ಮುಂದುವರೆಯುತ್ತವೆ.[೪] ಈ ಕಾಲದಲ್ಲಿ ಅಂದರೆ ಪ್ರೋಟೊಜೊಯಿಕ್ ಯುಗದ ಉತ್ತರಾರ್ಧದಲ್ಲಿ ಆರ್ಕೆಯನ್ ಶಿಲೆಗಳು ಕಂಡುಬರುತ್ತವೆ. ಹಿರಣ್ಯಕೇಶಿ ನದಿಯ ಪ್ರಾರಂಭ ಭಾಗ, (Lower reaches) ಹಾಗೂ ಘಟಪ್ರಭಾ ನದಿಯ ಮಧ್ಯದ ಭಾಗದಲ್ಲಿ (Middle reaches) ಆರ್ಕೆಯನ್ ಶಿಲೆಗಳಿವೆ.[೫] ಅವುಗಳಲ್ಲಿ ರೂಪಾಂತರ ಹೊಂದಿದ ಸಿಸ್ಟ್, ಫೈಲೈಟ್ಸ್, ಕ್ವಾರ್ಟ್ಜ್ ಹಾಗೂ ಗ್ರಾನೈಟ್ ನೀಸ್‌ಗಳು ಪ್ರಮುಖವಾಗಿವೆ.[೬] ಕೊಣ್ಣೂರು ಪರಿಸರದಲ್ಲಿ ಕಂಡುಬರುವ ಮತ್ತೊಂದು ಪ್ರಮುಖ ಶಿಲಾವರ್ಗ ಕಲಾದಗಿ ಶಿಲಾವರ್ಗ. ಈ ಶ್ರೇಣಿಯ ಶಿಲೆಯನ್ನು ಮೊಟ್ಟಮೊದಲ ಬಾರಿಗೆ ಬಾಗಲಕೋಟೆ ಜಿಲ್ಲೆಯ ಕಲಾದಗಿ ಪಟ್ಟಣದ ಸಮೀಪದಲ್ಲಿ ೧೮೭೬ರಲ್ಲಿ ರಾಬರ್ಟ್ ಬ್ರೂಸ್‌ಫೂಟ್‌ರವರು ಪತ್ತೆಹಚ್ಚಿದರು.[೭] ಇವು ದಖ್ಖನ್ ಪ್ರಸ್ಥಭೂಮಿಯಲ್ಲಿಯೇ ಅತೀ ಪ್ರಾಚೀನವಾದ ಶಿಲೆಗಳಾಗಿವೆ. ಕೊಣ್ಣೂರಿನ ಸಮೀಪದ ಗೋಕಾಕ್ ಪಟ್ಟಣ ಮತ್ತು ದಡ್ಡಿ ಗ್ರಾಮಗಳ ಸುತ್ತಮುತ್ತ ಇಂಥ ಶಿಲಾರಚನೆಗಳು ಕಂಡುಬರುತ್ತವೆ.[೭] ಘಟಪ್ರಭಾ ಕಣಿವೆಯ ಮಧ್ಯದ ಮತ್ತು ಕೆಳಗಣ (Middle and Lower reaches) ಪ್ರದೇಶದಲ್ಲಿ ಹೆಚ್ಚಾಗಿ ನೋಡಬಹುದಾಗಿದೆ.[೮] ಇವು ನದಿಗಳ ಗಷ್ಟು (Sediment) ಹಾಗೂ ರೂಪಾಂತರದಿಂದ ರಚನೆಯಾಗಿವೆ.[೯] ಕ್ವಾರ್ಟ್‌ಜೈಟ್, ಮರಳು ಶಿಲೆ, ಸುಣ್ಣದ ಕಲ್ಲು, ಬಳಪದ ಕಲ್ಲು ಹಾಗೂ ಪೆಂಟೆಕಲ್ಲುಂಡೆ (Conlgomarate)ಗಳು ಪ್ರಮುಖ ಪ್ರಬೇಧಗಳಾಗಿವೆ. ಪೆಂಟೆಕಲ್ಲುಂಡೆ ಶಿಲೆಗಳು ಬೂದನೇರಳೆ, ಕಡುನೇರಳೆ ಹಾಗೂ ಕಂದುಗುಲಾಬಿ ಬಣ್ಣಗಳಲ್ಲಿ ಕಂಡುಬರುತ್ತವೆ.[೧೦] ಆದರೆ ಕೊಣ್ಣೂರು ಪರಿಸರದ ಕಲಾದಗಿ

ಶಿಲೆಗಳು ಏಕರೂಪದ ರಚನೆ ಮತ್ತು ಕೆಂಪು ಬಣ್ಣವನ್ನು ಹೊಂದಿರುವುದು ವಿಶೇಷ. ಗೋಕಾಕ್ ಫಾಲ್ಸ್‌ನ ಕೆಳಭಾಗದಲ್ಲಿ ಇಂಥಹ ಶಿಲಾರಚನೆಗಳ ಪದರುಗಳು ಕಂಡುಬರುತ್ತವೆ. ಇಲ್ಲಿನ ಕ್ವಾರ್ಟ್ಜ್ ಮತ್ತು ಕಾಂಗ್ಲೋಮರೇಟ್ ಶಿಲೆಗಳು ಸುಮಾರು ೪೦೦ ಅಡಿಗಿಂತ ಹೆಚ್ಚು ದಪ್ಪವಿರುವ ಪದರುಗಳನ್ನು ಹೊಂದಿವೆ. ಫಾಲ್ಸ್‌ನ ಉತ್ತರಭಾಗದಲ್ಲಿ ತೆರೆದಿರುವ ಬಂಡೆಗಳು ಸುಮಾರು ೩೦೦ ಅಡಿಗಳಷ್ಟು ದಪ್ಪವಾಗಿರುವುದು ಸ್ಪಷ್ಟವಾಗಿ ಗೋಚರಿಸುತ್ತವೆ.[೧೧] ಕ್ವಾರ್ಟ್ಜ್‌ಶಿಲೆಯು ಕಠಿಣ ಸ್ವರೂಪದ್ದಾಗಿದ್ದರೂ ನದಿಯ ರಭಸಕ್ಕೆ ದೊಡ್ಡದಾದ ಕುಳಿ ಅಥವಾ ಕಂದಕ (Pot holes)ಗಳು ನಿರ್ಮಾಣವಾಗಿರುವುದನ್ನು ಇಲ್ಲಿ ಕಾಣುತ್ತೇವೆ. ಗೋಕಾಕ್ ನಗರದಿಂದ ವಾಯುವ್ಯಕ್ಕೆ ೪ ಕಿ.ಮೀ. ದೂರದಲ್ಲಿರುವ ಮಾರ್ಕಂಡೇಯ ಮತ್ತು ಘಟಪ್ರಭಾ ನದಿಗಳು ಕೂಡುವ (ಸಂಗಮ) ಪ್ರದೇಶದಲ್ಲಿ ಕಲಾದಗಿ ಶ್ರೇಣಿಯ ಬೆಟ್ಟಗಳಿದ್ದು, ಅರಭಾವಿಯ ಹತ್ತಿರ ಕಲಾದಗಿ ಶಿಲಾ ಶ್ರೇಣಿಯ ಮೇಲೆ ಡೆಕ್ಕನ್ ಟ್ರಾಪ್ (Deccan Trap) ಶಿಲಾರಚನೆಯ ಕಂಡುಬರುತ್ತದೆ. ಕ್ವಾರ್ಟ್‌ಜೈಟನ ಶಿಲಾಪದರುಗಳನ್ನು ದಡ್ಡಿ ಮತ್ತು ಪಾಶ್ಚಾಪೂರ ಗ್ರಾಮಗಳ ಸುತ್ತಲೂ ಕಾಣಬಹುದು. ಮೇಲೆ ತಿಳಿಸಿದ ಆರ್ಕೆಯನ್ ಮತ್ತು ಕಲಾದಗಿ ಶಿಲಾವರ್ಗಗಳು ಪ್ರಿಕೇಂಬ್ರಿಯನ್ ಯುಗಕ್ಕೆ ಸಂಬಂಧಿಸಿದ್ದವುಗಳಾಗಿದ್ದು ಅವು ನದಿಜನ್ಯ ಸ್ವರೂಪದ್ದಾಗಿವೆ.[೧೨]

ಕೊಣ್ಣೂರು ಪರಿಸರದಲ್ಲಿ ಡೆಕ್ಕನ್ ಟ್ರಾಪ್ ಶಿಲಾರಚನೆಗಳಿದ್ದು,[೧೩] ಬೆಳಗಾವಿ ಜಿಲ್ಲೆಯಲ್ಲಿ ಇವು ಗೋಕಾಕ್‌ದಿಂದ ರಾಮದುರ್ಗದವರೆಗೆ ಹರಡಿಕೊಂಡಿವೆ.[೧೪] ಈ ಶಿಲಾಪದರುಗಳು ಪೂರ್ವದಿಂದ ಪಶ್ಚಿಮಕ್ಕೆ ಹೋದಂತೆ ಆಳವಾಗಿವೆ. ಗೋಕಾಕ್ ಸಮೀಪದ ಬಾಗೇದಗುಡ್ಡವು ಡೆಕ್ಕನ್‌ಟ್ರಾಪ್ ಶಿಲಾವರ್ಗವನ್ನು ಪ್ರತಿನಿಧಿಸುವ ಪ್ರಮುಖವಾದ ಪ್ರದೇಶವಾಗಿದೆ. ಡೆಕ್ಕನ್‌ಟ್ರಾಪ್ ಶಿಲಾವರ್ಗವು ಜ್ವಾಲಾಮುಖಿಯಿಂದುಂಟಾಗಿದ್ದು, ಅವು ಕ್ರಿಟೇಸಿಯಸ್-ಇಯೋಸೀನ್ (Cretaceuns-Eocene) ಯುಗಕ್ಕೆ ಸಂಬಂಧಿಸಿದ್ದವುಗಳಾಗಿವೆ.[೧೫] ಬಸಾಲ್ಟ್, ಅಮಿಗ್ಡಲಾಯಿಡ್, ಡೊಲರೈಟ್ ಈ ವರ್ಗದ ಶಿಲೆಯ ಪ್ರಮುಖ ಪ್ರಬೇಧಗಳಾಗಿವೆ. ಡೆಕ್ಕನ್ ಟ್ರಾಪ್ ಶಿಲೆಗಳಲ್ಲಿ ಕೆಲವು ಕಡೆ ಪಳೆಯುಳಿಕೆಗಳಿರುವುದು ಕಂಡುಬರುತ್ತದೆ. ವಿಶೇಷವಾಗಿ ಕೌಜಲಗಿ, ಉಪ್ಪಾರಟ್ಟಿ, ಮಮದಾಪುರಗಳಲ್ಲಿ ಇಂಥ ಪಳೆಯುಳಿಕೆಗಳು ಪತ್ತೆಯಾಗಿವೆ.[೧೬] ಇದೇ ಕ್ರಿಟೇಶಿಯಸ್ ಇಯೋಸೀನ್ ಕಾಲದ ಇಂಟರ್‌ಟ್ರಾಪಿಯನ್ (Intertrapean) ಶಿಲೆಗಳು ಕೂಡ ಇದೇ ಪರಿಸರದಲ್ಲಿ ಕಂಡುಬರುವವು. ಫೂಟ್‌ರವರು ೧೮೭೬ರಲ್ಲಿ ಈ ಪ್ರದೇಶದಲ್ಲಿ ಸಂಶೋಧನೆ ನಡೆಸಿರುವರು. ಈ ವರ್ಗದ ಶಿಲೆಗಳಲ್ಲಿ ಕೆಂಪುಮರುಳು ಶಿಲೆ, ನೀಸ್ ಮತ್ತು ಕ್ವಾರ್ಟ್‌ಜೈಟ್‌ಗಳು ಪ್ರಮುಖವಾಗಿದೆ.[೧೭] ಚತುರ್ಥ ಯುಗದ ಶಿಲೆಗಳೂ ಕೂಡ ಈ ಪರಿಸರದಲ್ಲಿ ಲಭ್ಯ. ಇವು ಬಹುತೇಕವಾಗಿ ನದಿ ಜನ್ಯವಾಗಿವೆ. ಇವುಗಳಲ್ಲಿ ಪ್ರಾಣಿ ಮತ್ತು ಸಸ್ಯಗಳ ಅವಶೇಷಗಳು ಕಂಡುಬಂದಿವೆ. ೧೮೭೬ರಲ್ಲಿ ರಾಬರ್ಟ್ ಬ್ರೂಸ್ ಫೂಟರು ನಡೆಸಿದ ಸಂಶೋಧನೆಯ ಫಲವಾಗಿ ಶಿಲೆಗಳಲ್ಲಿರುವ ಜೀವ-ಜಂತುಗಳ ಪಳೆಯುಳಿಕೆಗಳು ಪತ್ತೆಯಾಗಿವೆ. ಗೋಕಾಕ್ ತಾಲೂಕಿನ ಚಿಕದೌಲಿಯೆಂಬ ಪ್ರದೇಶದಲ್ಲಿ ದನದ ಜಾತಿಗೆ ಸೇರಿದ (Bos) ಪ್ರಾಣಿಗಳ ಅವಶೇಷಗಳು ದೊರಕಿವೆ. ಅವುಗಳಲ್ಲಿ ರಿನೋಸಾರಸ್ ಡೆಕ್ಯಾನಿನ್‌ಸಿಸ್ (Rhinoceros

Deccanensis) ಎಂಬ ಪ್ರಬೇಧದ ಪ್ರಾಣಿಯ ಅವಶೇಷಗಳನ್ನು ಪತ್ತೆ ಮಾಡಲಾಗಿದೆ.[೧೮] ಈ ವರ್ಗದ ಶಿಲೆಗಳು ಬಹುತೇಕವಾಗಿ ರೇವೆ. ಮಣ್ಣಿನಿಂದಾವೃತವಾಗಿವೆ.

ಒಟ್ಟಿನಲ್ಲಿ ಇಲ್ಲಿ ಲಭ್ಯವಿರುವ ಶಿಲಾರಚನೆಗಳು ಪ್ರಾಚೀನ ಮಾನವನ ಜೀವನ ಕ್ರಮಗಳಲ್ಲಿ ಪ್ರಭಾವ ಬೀರಿರುವ ಸಾಧ್ಯತೆಗಳಿವೆ.

**ನದಿ ಪರಿಸರ :**

ಕೊಣ್ಣೂರು ಪರಿಸರದಲ್ಲಿ ಜಲಸಂಪನ್ಮೂಲಕ್ಕೆ ಕೊರತೆಯಿಲ್ಲ. ಇಲ್ಲಿ ಹಲವಾರು ನದಿಗಳು, ಉಪನದಿಗಳು ಅವುಗಳಿಗೆ ಕೂಡುವ ಝರಿಗಳು, ಕೆರೆ, ಕಾಲುವೆಗಳು, ಬಾವಿಗಳು ಇದ್ದು ಅವು ಅನಾದಿಕಾಲದಿಂದಲೂ ಮಾನವನ ಜೀವನದ ನಿರ್ವಹಣೆಯ ಅವಿಭಾಜ್ಯ ಅಂಗಗಳಾಗಿ ಪಾತ್ರವಹಿಸುತ್ತ ಬಂದಿವೆ. ನದಿಗಳ ದಂಡೆಯ ಮೇಲೆ ಆದಿಮಾನವನು ತನ್ನ ಬದುಕನ್ನು ಕಟ್ಟಿಕೊಂಡಿದ್ದಾನೆ. ಅಂಥ ಸಾಂಸ್ಕೃತಿಕ ಬದುಕನ್ನು ಕಟ್ಟಿಕೊಳ್ಳುವಲ್ಲಿ ಘಟಪ್ರಭಾ ಹಾಗೂ ಅದರ ಉಪನದಿಗಳಾದ ಮಾರ್ಕಂಡೇಯ ಮತ್ತು ಹಿರಣ್ಯಕೇಶಿ ನದಿಗಳು ಬಹುಮಟ್ಟಿಗೆ ಜೀವಸೆಲೆಯಾಗಿ ನಿಂತಿವೆ. ಕೊಣ್ಣೂರು ಪರಿಸರದ ಪ್ರಾಚೀನ ಮಾನವನ ಬದುಕಿನ ಪ್ರಾಗಿತಿಹಾಸ ಹಾಗೂ ಇತಿಹಾಸ ಈ ನದಿ ಪರಿಸರದ ಇತಿಹಾಸವೇ ಆಗಿವೆ.

ಘಟಪ್ರಭಾ ನದಿಯು ಸಹ್ಯಾದ್ರಿ ಪರ್ವತ ಶ್ರೇಣಿಯ ಆಂಬೋಲಿ ಘಟ್ಟದ ಹತ್ತಿರದ ಚಂದಗಡ್ ತಾಲೂಕಿನ ರಾಮಘಡದಲ್ಲಿ ಉಗಮಿಸುತ್ತದೆ.[೧೯] ಇದು ಕೃಷ್ಣಾನದಿಯ ದಕ್ಷಿಣ ಭಾಗದ ಪ್ರಮುಖ ಉಪನದಿಗಳಲ್ಲೊಂದು. ಚಂದ್‌ಗಡ್‌ನಿಂದ ಪೂರ್ವಕ್ಕೆ ಹರಿದು ಬೆಳಗಾವಿ ಜಿಲ್ಲೆಯ ಹುಕ್ಕೇರಿ ತಾಲೂಕಿನ ದಡ್ಡಿ ಗ್ರಾಮದ ಸಮೀಪ ಇರುವ ಶೇಡಿಹಾಳ್‌ದಲ್ಲಿ ಪ್ರವೇಶ ಪಡೆಯುತ್ತದೆ. ಈ ನದಿಯು ಕರ್ನಾಟಕ ರಾಜ್ಯ ಹಾಗೂ ಬೆಳಗಾವಿ ಜಿಲ್ಲೆಯನ್ನು ಇಲ್ಲಿಂದಲೇ ಪ್ರವೇಶಿಸಲು ಅಣಿಯಾಗುತ್ತದೆ. ಈ ನದಿಯ ಒಟ್ಟು ಹರಿವು ೩೦೪ ಕಿ.ಮೀ.[೨೦] ದಡ್ಡಿಯ ಸಮೀಪ ಇದಕ್ಕೆ ತಾಮ್ರಪರ್ಣಿ ನದಿ ಕೂಡುತ್ತದೆ.[೨೧] ತಾಮ್ರಪರ್ಣಿ ನದಿಯ ಒಟ್ಟು ಹರಿವು ೭೦ ಕಿ.ಮೀ.[೨೨] ಘಟಪ್ರಭಾ ನದಿಗೆ ಹಿರಣ್ಯಕೇಶಿ ಮತ್ತು ಮಾರ್ಕಂಡೇಯ ನದಿಗಳು ಬಂದು ಸೇರುತ್ತವೆ. ಹಿರಣ್ಯಕೇಶಿ ನದಿಯ ಮಹಾರಾಷ್ಟ್ರದ ಅಜಾರಾ ಹತ್ತಿರ ಹುಟ್ಟಿ, ಪೂರ್ವಾಭಿಮುಖವಾಗಿ ಹರಿದು ಹುಕ್ಕೇರಿ ತಾಲೂಕಿನ ಇಂಗಳಿಗಿ ಗ್ರಾಮದ ಹತ್ತಿರ ಘಟಪ್ರಭಾ ನದಿಯನ್ನು ಸೇರುತ್ತದೆ. ಈ ನದಿಯ ಒಟ್ಟು ಹರಿವು ೧೨೦ ಕಿ.ಮೀಗಳು.[೨೩] ಮಾರ್ಕಂಡೇಯ ನದಿಯು ಖಾನಾಪುರ ತಾಲೂಕಿನ ಬೈಲೂರು ಎಂಬ ಹಳ್ಳಿಯ ಹತ್ತಿರ ಉಗಮವಾಗುತ್ತದೆ. ಇದು ಗೋಕಾಕ್‌ದ ಹತ್ತಿರ ಘಟಪ್ರಭಾ ನದಿಯನ್ನು ಕೂಡುತ್ತದೆ. ಮಾರ್ಕಂಡೇಯ ನದಿಯ ಒಟ್ಟು ಹರಿವು ೧೦೦ ಕಿ.ಮೀಗಳು.[೨೪]

ಘಟಪ್ರಭಾ ಹಾಗೂ ಅದರ ಉಪನದಿಗಳು ತಮ್ಮ ಪರಿಸರದಲ್ಲಿ ಮಾನವನ ಅನೇಕ ವಸತಿ ನೆಲೆಗಳನ್ನು ಗರ್ಭೀಕರಿಸಿಕೊಂಡಿವೆ. ಆ ಕಾಲದಲ್ಲಿ ಬಿಟ್ಟುಹೋಗಿರುವ ಅವಶೇಷಗಳು ಹೇರಳ ಪ್ರಮಾಣದಲ್ಲಿ ಈವರೆಗೂ ಪತ್ತೆಯಾಗುತ್ತಿವೆ. ಶಿಲಾಯುಗದ ಪರಿಸರಕ್ಕೆ ಸಂಬಂಧಿಸಿದ ಮುಖ್ಯ ನೆಲೆಗಳಾಗಿ ದಡ್ಡಿ,

ಇಂಗಳಗಿ, ಕುಂದರಗಿ, ಪಾಚ್ಛಾಪೂರ, ಮಾವನೂರು, ಅರಭಾವಿ, ಗೊಡಚಿನಮಲ್ಕಿ, ಬೆಣಚಿನಮರಡಿ, ಮಾಲದಿನ್ನ, ಉಪ್ಪಾರಟ್ಟಿ ಮಮದಾಪುರ ಗಡಿಹೊಳ್ಳಿಗಳಲ್ಲಿ,[೨೫] ಕಂಡುಬಂದಿವೆ. ಆದಿ, ಮಧ್ಯ ಮತ್ತು ಅಂತ್ಯ ಶಿಲಾಯುಗದ ನೆಲೆಗಳು ಈ ಪರಿಸರದಲ್ಲಿವೆ. ಅದೇ ರೀತಿ ಕೊಣ್ಣೂರು, ಸಾವಳಗಿ, ಹಿಡಕಲ್, ಹೂನೂರು, ಗುಮಚಿನಮರಡಿ, ಕುಂದರಗಿ, ಘೋಡಗೇರಿ, ಗೋಕಾಕ್ ಇವು ಪ್ರಮುಖವಾಗಿ ಬೃಹತ್ ಶಿಲಾ ಸಂಸ್ಕೃತಿಯ ನೆಲೆಗಳಾಗಿವೆ. ಕ್ಷೇತ್ರಕಾರ್ಯದಲ್ಲಿ ಕೆಲವು ನೆಲೆಗಳನ್ನು ಮರುಶೋಧಿಸುವ ಪ್ರಯತ್ನ ಮಾಡಲಾಗಿದೆ.

ಒಟ್ಟಾರೆಯಾಗಿ ಕೊಣ್ಣೂರು ಪರಿಸರದಲ್ಲಿ ಹರಿಯುವ ಘಟಪ್ರಭಾ ಹಾಗೂ ಅದರ ಉಪನದಿಗಳು ಪ್ರಾಚೀನ ಮಾನವನಿಗೆ ಹಾಗೂ ಈ ಕಾಲದವರೆಗೂ ನಾಗರಿಕತೆ ಬೆಳವಣಿಗೆಯಲ್ಲಿ ತುಂಬಾ ಸಹಕಾರಿಯಾದ ಪಾತ್ರವಹಿಸುತ್ತಾ ಬಂದಿವೆ. ಇಂದಿನ ದಿನಮಾನಗಳಲ್ಲಿ ಈ ಪ್ರದೇಶದ ಆರ್ಥಿಕ ಅಭಿವೃದ್ಧಿಯ ಬೆನ್ನೆಲುಬಾಗಿ ಈ ಪರಿಸರವು ಪ್ರಮುಖ ಪಾತ್ರವಹಿಸುತ್ತಿವೆ. ಘಟಪ್ರಭಾ ನದಿಗೆ ಹಿಡಕಲ್, ಗ್ರಾಮದ ಬಳಿ ಜಲಾಶಯವೊಂದನ್ನು ನಿರ್ಮಿಸಲಾಗಿದೆ. ಹಾಗೇ ಮಾರ್ಕಂಡೇಯ ನದಿಗೆ ಶಿರೂರು ಗ್ರಾಮದ ಸಮೀಪ ದೊಡ್ಡದಾದ ಬ್ಯಾರೇಜನ್ನು ನಿರ್ಮಿಸಲಾಗಿದ್ದು, ಈ ಭಾಗದ ಕೃಷಿ, ಕೈಗಾರಿಕೆ ಮತ್ತು ಜನರ ಜೀವನೋಪಾಯಕ್ಕೆ ಇವು ಹೆಚ್ಚಿನ ಸಹಾಯಕವಾಗಿವೆ.[೨೬]

## ಮಣ್ಣು ಮತ್ತು ಕೃಷಿ :

ಕೊಣ್ಣೂರು ಪರಿಸರದಲ್ಲಿ ನದಿಗಳು, ಉಪನದಿಗಳು ಹಳ್ಳ ಹಾಗೂ ಝರಿಗಳು ಹೆಚ್ಚಿನ ಕಾಲ ಹರಿಯುವುದರಿಂದ ಸಹಜವಾಗಿಯೇ ಈ ಪ್ರದೇಶ ಫಲವತ್ತತೆಯಿಂದ ಕೂಡಿದೆ. ಕಪ್ಪು ಎರೆಮಣ್ಣಿನಿಂದ ಕೂಡಿದ ಪ್ರದೇಶ ಇಲ್ಲಿ ಹೆಚ್ಚಾಗಿದ್ದು ಕೆಲವು ಕಡೆ ಮಾತ್ರ ಕೆಂಪು ಎರೆಮಣ್ಣು ಹಾಗೂ ಮರಳು ಮಿಶ್ರಿತ ಮಣ್ಣು ಮತ್ತು ಕರ್ಲ ಮಣ್ಣು ಕಂಡುಬರುತ್ತದೆ.[೨೭] ಈ ಭಾಗದಲ್ಲಿನ ಪಾಚ್ಛಾಪುರ ಗ್ರಾಮ ಪರಿಸರದ ಸುತ್ತಲಿನ ಭೂಮಿಯು ಕುಂದರನಾಡಿನಲ್ಲಿಯೇ ಅತೀ ಹೆಚ್ಚು ಫಲವಾತ್ತಾದ ಪ್ರದೇಶವಾಗಿದೆ.[೨೮] ಇಲ್ಲಿ ಬೆಳೆಯುವ ಜೋಳ, ಮೆಣಸಿನ ಕಾಯಿ ಹಾಗೂ ಕಬ್ಬು ಹೆಚ್ಚು ಪ್ರಾಮುಖ್ಯತೆಯನ್ನು ಪಡೆದಿವೆ. ಕೊಣ್ಣೂರು ಪರಿಸರದಲ್ಲಿ ಕಬ್ಬು, ಜೋಳ, ಗೋಧಿ, ತಂಬಾಕು, ಹತ್ತಿ, ಶೇಂಗಾ, ಹೆಸರು ಸೋಯಾ ಮುಂತಾದ ಧಾನ್ಯಗಳನ್ನು ಬೆಳೆಯಲಾಗುತ್ತದೆ. ಉಪ್ಪಿನಾಂಶವುಳ್ಳ ಕರ್ಲಮಣ್ಣು ಗೋಧಿ ಬೆಳೆಗೆ ಸೂಕ್ತವಾಗಿರುತ್ತದೆ. ಕಪ್ಪು ಎರೆಮಣ್ಣು ಫಲವತ್ತಾಗಿದ್ದು ಕಬ್ಬು ಹತ್ತಿಗೆ ಅತ್ಯುತ್ತಮ. ಈ ಭಾಗದ ಹೆಚ್ಚಿನ ಜನರು ಕೃಷಿಯೇತರ ಚಟುವಟಿಕೆಗಳಲ್ಲಿಯೂ ತೊಡಗಿರುವುದು ವಿಶೇಷವಾಗಿದೆ.

## ಹವಾಗುಣ :

ಕೊಣ್ಣೂರು ಪರಿಸರದ ಹವಾಗುಣವು ಉತ್ತಮವಾಗಿದೆ. ಮಾನ್‌ಸೂನ್ ಮಳೆಯಾಧಾರಿತ ಈ ಪ್ರದೇಶದಲ್ಲಿ ಉತ್ತಮ ಮಳೆಯಾಗುತ್ತದೆ. ವಿಶೇಷವಾಗಿ ಜೂನ್‌ನಿಂದ-ಸೆಪ್ಟಂಬರ್ ಅವಧಿಯಲ್ಲಿ ಮಳೆ

ಹೆಚ್ಚು. ಸರಾಸರಿ ಮಳೆಯ ಪ್ರಮಾಣ ವಾರ್ಷಿಕ ೫೦೦ ಮಿ.ಮೀ. ಅದೇ ರೀತಿಯಾಗಿ ಈ ಪ್ರದೇಶದಲ್ಲಿ ಬೆಟ್ಟ-ಗುಡ್ಡಗಳಿರುವ ಕಾರಣ ಬಿಸಿಲು ಹೆಚ್ಚು. ಬೇಸಿಗೆಯಲ್ಲಿ ಗರಿಷ್ಟ ೪೦°ಸೆ ವರೆಗೆ ಉಷ್ಣಾಂಶವಿರುತ್ತದೆ. ಅಲ್ಲಲ್ಲಿ ದಟ್ಟವಾದ ಹಾಗೂ ಕುರುಚಲು ಮತ್ತು ಶುಷ್ಕ ಅರಣ್ಯ ಪ್ರದೇಶವೂ ಇದೆ. ಗೋಕಾಕದ ಹತ್ತಿರದ ಬಸ್ತೀಗುಡ್ಡವು ಸಮುದ್ರ ಮಟ್ಟದಿಂದ ೮೧೨ ಮೀ ಹಾಗೂ ಮಣ್ಣಿಕೇರಿ ಬೆಟ್ಟವು ಸು. ೭೫೦ ಮೀಟರ್ ಎತ್ತರವಾಗಿದೆ.[೫] ಹುಕ್ಕೇರಿ ತಾಲೂಕಿನಲ್ಲಿ ಕೂಡಾ ೯೧೪ ಮೀಟರ್. ಎತ್ತರದ ಬೆಟ್ಟಗಳಿವೆ. ಗೋಕಾಕದ ಹತ್ತಿರದ ಬಾಗೇದಗುಡ್ಡ, ಯೋಗಿಕೊಳ್ಳ, ಫಾಲ್ಸ್ ರಸ್ತೆಯಲ್ಲಿನ ಬೆಟ್ಟಗಳೂ ಎತ್ತರವಾಗಿದ್ದು, ಆರ್ಕೆಯನ್, ಡೆಕ್ಕನ್ ಟ್ರಾಪ್ ಮತ್ತು ಚತುರ್ಥ ಯುಗದ ಶಿಲೆಗಳನ್ನು ಹೊಂದಿವೆ. ಈ ಪ್ರದೇಶದಲ್ಲಿ ಸಾಗುವಾನೆ, ಬೀಟೆ, ಶ್ರೀಗಂಧ, ತೇಗ, ಮತ್ತಿ, ನಂದಿ, ಜಾಲಿ, ಹುಣಸೆ, ಬೇವು, ರೋಸ್‌ವುಡ್, ಬಿದಿರು ಮುಂತಾದ ಮರಗಳು ಬೆಳೆಯುತ್ತವೆ. ಬೃಹತ್ ಬೆಟ್ಟ ಹಾಗೂ ಶಿಲಾವೃತವಾದ ಈ ನಾಡಿನಲ್ಲಿ ಕೆಲವು ಪ್ರಮುಖವಾದ ಖನಿಜ ಸಂಪನ್ಮೂಲಗಳು ಸಹ ಭೂಮಿಯಲ್ಲಿ ಬೆರತುಹೋಗಿವೆ. ಮರಳುಶಿಲೆ, ಅಬ್ರಕ, ಸುಣ್ಣದಕಲ್ಲು, ನೀಸ್, ಡೋಲಮೈಟ್, ಮ್ಯಾಂಗನೀಸ್, ಸ್ಪಟಿಕದ ಶಿಲೆ ಮುಂತಾದವು ಸಿಗುತ್ತವೆ. ಅರಣ್ಯಪ್ರದೇಶ ಕೆಲವು ಕಡೆ ದಟ್ಟವಾಗಿದ್ದು ಮತ್ತೆ ಕೆಲವು ಕಡೆ ಶುಷ್ಕ ಅರಣ್ಯಗಳಿಂದ ಕೂಡಿದೆ. ಮತ್ತೆ ಕೆಲವು ಕಡೆ ಬಯಲು ಪ್ರದೇಶಗಳನ್ನು ನೋಡಬಹುದಾಗಿದೆ. ಕರಡಿ, ತೋಳ, ಮೊಲ, ಕಾಡುಬೆಕ್ಕು, ಹೈನಾ, ಬಾವಲಿ, ನರಿಗಳು ಇವು ಇಲ್ಲಿ ಕಂಡುಬರುವ ಪ್ರಮುಖವಾದ ವನ್ಯಮೃಗಗಳು, ಹಸು, ಎತ್ತು, ನಾಯಿ, ಬೆಕ್ಕು, ಮೊಲ, ಕುರಿ, ಮೇಕೆಗಳು ಸಾಕುಪ್ರಾಣಿಗಳು, ನವಿಲು, ಪಾರಿವಾಳ, ಬಾತುಕೋಳಿ, ಕಿಂಗ್‌ಫಿಷರ್ ಇವು ಪ್ರಮುಖವಾದ ಈ ಪ್ರದೇಶದ ಪಕ್ಷಿಸಂಕುಲ.

**ಪ್ರಾಗಿತಿಹಾಸ :**

ಸ್ವಾತಂತ್ರಪೂರ್ವ ಕಾಲದಿಂದಲೂ ಭಾರತದ ಹಾಗೂ ಕರ್ನಾಟಕದ ಬೇರೆ ಬೇರೆ ಪ್ರಾಚೀನ ಸಂಸ್ಕೃತಿಯ ನೆಲೆಗಳನ್ನು ಕುರಿತು ದೇಶೀಯ ಹಾಗೂ ವಿದೇಶಿ ಪುರಾತತ್ವ ಶಾಸ್ತ್ರಜ್ಞರು ಸಂಶೋಧನೆಯನ್ನು ಕೈಗೊಂಡಿದ್ದಾರೆ. ಆರಂಭಿಕ ಹಂತದಲ್ಲಿ ಪುರಾತತ್ವ ವಿದ್ವಾಂಸರು ಪ್ರಾಚೀನ ನಾಗರಿಕತೆಯ ಬಗೆಗೆ ಮಾಹಿತಿಯನ್ನು ಸಂಗ್ರಹಿಸಿ ಪರಿಚಯಿಸಿದರೆ, ನಂತರದ ಮಾಹಿತಿಯನ್ನು ಅರ್ಥೈಸಿ ವಿಶ್ಲೇಷಿಸುವ ಕಾರ್ಯವನ್ನು ಕೈಗೊಂಡಿದ್ದಾರೆ. ಈ ದಿಸೆಯಲ್ಲಿ ರಾಬರ್ಟ್ ಬ್ರೂಸ್‌ಫೂಟ್, ಕರ್ನಲ್ ಮೆಕಂಜಿ, ಎಂ.ಎಚ್.ಕೃಷ್ಣ, ಬಿ.ಸುಬ್ಬರಾವ್, ಆರ್.ಶೇಷಾದ್ರಿ ಎಚ್.ಡಿ.ಸಂಕಾಲಿಯ, ಆರ್.ಎಸ್.ಪಪ್ಪು ಹಾಗೂ ಅ.ಸುಂದರರವರು ಕೈಗೊಂಡ ಸರ್ವೇಕ್ಷಣೆ ಹಾಗೂ ಅನ್ವೇಷಣೆಯ ಫಲವಾಗಿ ನೂರಾರು ಹಳೆಯ ಶಿಲಾಯುಗ, ನವಶಿಲಾಯುಗ ಹಾಗೂ ಬೃಹತ್ ಶಿಲಾಯುಗದ ನೆಲೆಗಳು ಪತ್ತೆಯಾಗಿವೆ. ಭಾರತೀಯ ಪುರಾತತ್ವ ಇಲಾಖೆ, ಮೈಸೂರು ಪುರಾತತ್ವ ಇಲಾಖೆ ಹಾಗೂ ಪೂಣೆಯಲ್ಲಿ ಡೆಕ್ಕನ್ ಕಾಲೇಜು ಸಂಸ್ಥೆಗಳು ಇತಿಹಾಸಪೂರ್ವ ನೆಲೆಗಳನ್ನು ಪತ್ತೆಹಚ್ಚುವಲ್ಲಿ ಶ್ರಮವಹಿಸಿ ದುಡಿದಿವೆ. ಮದ್ರಾಸಿನ ಬಳಿಯ 'ಪಲ್ಲಾವರಂ' ಎಂಬಲ್ಲಿ ಕ್ರಿ.ಶ. ೧೮೬೩ರಲ್ಲಿ ರಾಬರ್ಟ್ ಬ್ರೂಸ್‌ಫೂಟ್‌ರು, ಜಂಬುಮಣ್ಣಿನ ಗರಸು (Laterite) ನೆಲದಲ್ಲಿ

ಮೊದಲ ಬಾರಿಗೆ ಶಿಲಾಯುಗದ ಉಪಕರಣಗಳನ್ನು ಶೋಧಿಸಿದ್ದಾರೆ.[೩೦] ಕರ್ನಾಟಕದಲ್ಲಿಯೂ ಕೂಡ ಇವರೇ ಮೊದಲಬಾರಿಗೆ ಪ್ರಾಚೀನ ನಾಗರಿಕತೆಗಳನ್ನು ಗುರುತಿಸುವ ಪ್ರಯತ್ನ ಮಾಡಿ ಯಶಸ್ವಿಯಾಗಿದ್ದಾರೆ. ಆರ್.ಎಸ್.ಪಪ್ಪು, ಎಸ್.ಬಿ.ದೇವ್, ಆರ್.ವ್ಹಿ.ಜೋಷಿ, ಎಸ್.ಎಸ್.ಮಾಳವಾಡ, ಅ.ಸುಂದರ, ರವಿ ಕೋರಿಶೆಟ್ಟರ, ರು.ಮ.ಷಡಕ್ಷರಯ್ಯ, ಮೊದಲಾದ ಸಂಶೋಧಕರು, ಉತ್ತರ ಕರ್ನಾಟಕದ ಪ್ರಾಗಿತಿಹಾಸ ಕಾಲದ ಬೇರೆ ಬೇರೆ ನೆಲೆಗಳನ್ನು ಗುರುತಿಸುವ ಪ್ರಯತ್ನ ಮಾಡಿದ್ದಾರೆ. ಅ.ಸುಂದರ ಅವರು ಉತ್ತರ ಕರ್ನಾಟಕದ ಪ್ರಮುಖ ಪ್ರಾಗಿತಿಹಾಸದ ನೆಲೆಗಳನ್ನು ಗುರುತಿಸಿ ವಿಶ್ಲೇಷಿಸುವ ಪ್ರಯತ್ನ ಮಾಡಿದವರಲ್ಲಿ ಮೊದಲಿಗರು. ಶೈಕ್ಷಣಿಕ ಸಂಸ್ಥೆಗಳಷ್ಟೇ ಉತ್ತಮ ಸಂಶೋಧನೆಯ ಕಾರ್ಯಗಳನ್ನು ನಿರ್ವಹಿಸುತ್ತಿರುವ ಕರ್ನಾಟಕ ಇತಿಹಾಸ ಅಕಾಡೆಮಿ ಹಾಗೂ ಕರ್ನಾಟಕ ಇತಿಹಾಸ ಕಾಂಗ್ರೆಸ್ ಪರಿಷತ್‌ಗಳು ತಮ್ಮ ವಾರ್ಷಿಕ ಸಮ್ಮೇಳನದಲ್ಲಿ ಹೊಸ ಹೊಸ ನೆಲೆಗಳನ್ನು ಪರಿಚಯಿಸುವ ಹಾಗೂ ಅರ್ಥೈಸುವ ಕಾರ್ಯಗಳನ್ನು ಕಾರ್ಯಗಳನ್ನು ಮಾಡುತ್ತಿವೆ.

ಕೊಣ್ಣೂರು ಪರಿಸರದಲ್ಲಿರುವ ಘಟಪ್ರಭಾ, ಮಾರ್ಕಂಡೇಯ ಮತ್ತು ಹಿರಣ್ಯಕೇಶಿ ನದಿಗಳ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಪ್ರಾಚೀನ ನೆಲೆಗಳಿರುವುದು ಪತ್ತೆಯಾಗಿದೆ. ಆದಿಶಿಲಾಯುಗದಿಂದ ಬೃಹತ್ ಶಿಲಾಯುಗದ ಸಂಸ್ಕೃತಿಯ ಕಾಲದ ವರೆಗಿನ ಹಲವಾರು ಪ್ರಾಗಿತಿಹಾಸ ಕಾಲದ ಕುರುಹುಗಳು ಲಭ್ಯವಾಗಿವೆ. ೧೮೭೬ರಲ್ಲಿ ಪ್ರಪ್ರಥಮ ಬಾರಿಗೆ ರಾಬರ್ಟ್ ಬ್ರೂಸ್‌ಫೂಟ್‌ರು ಕೈಗೊಂಡ ಅನ್ವೇಷಣೆಯ ಫಲವಾಗಿ ಗೋಕಾಕ್‌ದ ಸುತ್ತಮುತ್ತಲಿನ ಪ್ರದೇಶದಲ್ಲಿ 'ರಿನೊಸಾರಸ್' ಪ್ರಾಣಿಯ ಅವಶೇಷಗಳನ್ನು ಪತ್ತೆ ಮಾಡಿದ್ದಾರೆ.[೩೧] ಈ ಭಾಗದಲ್ಲಿ ಲೋಳಸುರ, ಕುಂದರಗಿ, ಅರಭಾವಿ, ಕೊಳವಿ, ಚಿಕದೌಲಿ, ಕೊಣ್ಣೂರು, ಸಾವಳಗಿ, ಗೊಡಚಿನಮಲ್ಕಿ, ಗುಮಚಿನಮರಡಿ, ಪಾಶ್ಚಾಪುರ, ಮಾವನೂರು, ನಿರ್ವಾಣಹಟ್ಟಿ, ಘೋಡಗೇರಿ, ನದಿಗುಡಿಕ್ಷೇತ್ರ ಮುಂತಾದ ಪ್ರದೇಶಗಳು ಆದಿಶಿಲಾಯುಗದ ಕಾಲದಿಂದ ಇತಿಹಾಸ ಕಾಲದವರೆಗೆ ಒಂದಲ್ಲ ಒಂದು ರೀತಿಯಲ್ಲಿ ಪ್ರಮುಖ ಪಾತ್ರವಹಿಸಿದ ನೆಲೆಗಳಾಗಿವೆ. ಪ್ರಾಗಿತಿಹಾಸ ಕಾಲದ ಪರಿಸರ ಹಾಗೂ ಸಂಸ್ಕೃತಿಯನ್ನು ಈ ಕೆಳಗಿನಂತೆ ಅರಿತುಕೊಳ್ಳಬಹುದಾಗಿದೆ.

### ಆದಿ ಹಳೆಯ ಶಿಲಾಯುಗದ ನೆಲೆಗಳು :

ಆದಿ ಹಳೆಯ ಶಿಲಾಯುಗದ ಹಲವಾರು ನೆಲೆಗಳು ಕೊಣ್ಣೂರು ಪರಿಸರದಲ್ಲಿ ಕಂಡುಬರುತ್ತವೆ. ಲೋಳಸುರ, ಕುಂದರಗಿ, ಕೊಳವಿ, ಹೊಣಗಿ, ಮಮದಾಪುರ, ಬೆಣಚಿನಮರಡಿ, ಅರಭಾವಿ, ಪಾಶ್ಚಾಪೂರ, ಗುಮಚಿನಮರಡಿ, ಉಪಾರಟ್ಟಿ ಪ್ರಮುಖವಾಗಿವೆ.[೩೨] ಈ ಪ್ರದೇಶಗಳಲ್ಲಿ ಡಾ.ಆರ್.ಎಸ್.ಪಪ್ಪು ಹಾಗೂ ಎಸ್.ಬಿ.ದೇವ್‌ರವರು ನದಿ ಸುತ್ತಲಿನ ಪರಿಸರವನ್ನು ಕುರಿತು ಸಂಶೋಧನೆಯನ್ನು ಕೈಗೊಂಡಿದ್ದಾರೆ. ಸಂಬಂಧಿಸಿದ ಅಧ್ಯಯನ ಕುರಿತು ಈ ಪರಿಸರದ ಆದಿ ಹಳೆಯ ಶಿಲಾಯುಗದ ನೆಲೆಗಳಲ್ಲಿ ಕ್ಷೇತ್ರಕಾರ್ಯಗಳನ್ನು ಕೈಗೊಳ್ಳಲಾಯಿತು. ಈ ಪರಿಸರ ಮಾನವನಿಗೆ ವಾಸಿಸಲು ಪ್ರಶಸ್ತವಾದ ಪ್ರದೇಶವಾಗಿದೆ. ಮಾನವನು ತನ್ನ ವಾಸಸ್ಥಾನವನ್ನು ನದಿ ಹಾಗೂ ಬೆಟ್ಟದಾಸರೆಯಲ್ಲಿ ಆಯ್ಕೆ ಮಾಡಿಕೊಂಡಿರುವುದು

ಅಧ್ಯಯನಗಳಿಂದ ತಿಳಿದುಬರುವ ವಿಷಯವಾಗಿದೆ. ಪಾಶ್ಚಾಪುರದಿಂದ ವಾಯವ್ಯಕ್ಕೆ ನಾಲ್ಕು ಕಿ.ಮೀ ದೂರದಲ್ಲಿರುವ ಗುಮಚನಮರಡಿ[೩೩] ಎಂಬಲ್ಲಿ ಕ್ಷೇತ್ರಕಾರ್ಯ ಕೈಗೊಂಡಾಗ ಅಲ್ಲಿ ಮಾನವನ ಸಂಸ್ಕೃತಿಯ ವಿವಿಧ ಹಂತಗಳು ಕಂಡುಬಂದವು. ಮಾರ್ಕಂಡೇಯ ನದಿ ಪರಿಸರದ ಈ ನೆಲೆಯಲ್ಲಿ ಆದಿಶಿಲಾಯುಗದಿಂದ ಬೃಹತ್ ಶಿಲಾಯುಗದ ಸಂಸ್ಕೃತಿಯವರೆಗಿನ ವಿವಿಧ ಕಾಲಘಟ್ಟವನ್ನು ಗುರುತಿಸಲಾಯಿತು. ಕಪ್ಪುಮಣ್ಣಿನಿಂದ ಆವೃತವಾದ ಈ ಪ್ರದೇಶದಲ್ಲಿ ಇಂದಿಗೂ ಜನವಸತಿ ಇದೆ. ಈ ನೆಲೆಯು ಪಕ್ಕದ ಗುಡ್ಡದ ಸಮೀಪದ ಹೊಲವೊಂದರಲ್ಲಿ ಸರ್ಕಾರ ನಾಲೆಯೊಂದನ್ನು ತೋಡುತ್ತಿದ್ದು ಅಲ್ಲಿ ಪತ್ತೆಯಾಯಿತು. ಅಲ್ಲಿ ಹಲವಾರು ಸ್ತರಗಳು ಕಂಡುಬಂದಿದ್ದು ಮೇಲ್‌ಸ್ತರದಲ್ಲಿ ಬೃಹತ್ ಸಂಸ್ಕೃತಿ ಹಾಗೂ ಅದರ ಕೆಳಗಿನ ಸುಮಾರು ೮-೧೦ ಅಡಿ ಆಳದ ಕಲ್ಲುಗುಂಪೆಯ ಸ್ತರದಲ್ಲಿ ಹಳೆಯ ಶಿಲಾಯುಗ ಕಾಲದ ಉಪಕರಣಗಳು ದೊರಕಿವೆ. ಅವುಗಳಲ್ಲಿ ದೊಡ್ಡದಾದ ಕೈಗೊಡಲಿಯೂ ೨೧ ಸೆ.ಮೀ. ಉದ್ದ ಹಾಗೂ ೧೩ ಸೆ.ಮೀ ಅಗಲವಾಗಿದೆ. ಇದೇ ಪರಿಸರದಲ್ಲಿ ಸೂಕ್ಷ್ಮ ಶಿಲಾಯುಧ ಸಿಗುವ ಸಾಧ್ಯತೆಗಳಿದ್ದು ಹೆಚ್ಚಿನ ಅಧ್ಯಯನ ಅವಶ್ಯಕತೆಯಿದೆ. ಗೋಕಾಕ್‌ದಿಂದ ನಾಲ್ಕು ಕಿ.ಮೀ ದೂರದ ಲೋಳಸೂರದಲ್ಲಿ ಆದಿ ಹಳೆಯ ಶಿಲಾಯುಗದ ಆಯುಧೋಪಕರಣಗಳನ್ನು ಪತ್ತೆ ಹಚ್ಚಿದ್ದಾರೆ. ಕ್ಷೇತ್ರಕಾರ್ಯ ಕೈಗೊಂಡಾಗ ಕೆಲವೊಂದು ಉಪಕರಣಗಳು ದೊರಕಿವೆ. ಅವುಗಳಲ್ಲಿ ಸು. ೧೫.೫ ಸೆ.ಮೀ ಉದ್ದ ೧೦ ಸೆ.ಮೀ ಅಗಲವಾದ ಕೈಗೊಡಲಿ ಪ್ರಮುಖವಾಗಿದೆ. ಘಟಪ್ರಭಾ ನದಿಗೆ ಸೇರುವ ನಾಲೆಯೊಂದರ ಸುತ್ತಮುತ್ತಲಿನ ಪ್ರದೇಶದಲ್ಲಿ ಇಂತಹ ಉಪಕರಣಗಳು ಕಂಡುಬರುತ್ತವೆ. ಇಂದಿಗೂ ಈ ಪ್ರದೇಶದಲ್ಲಿ ಜನವಸತಿಯಿರುವುದು ವಿಶೇಷ. ಅದೇ ರೀತಿಯಾಗಿ ಕುಂದರಗಿ ಹಾಗೂ ಕೊಳವಿಗಳಲ್ಲಿಯೂ ಕೂಡ ಹಲವಾರು ಉಪಕರಣಗಳು ದೊರಕಿವೆ.[೩೪] ಅವುಗಳಲ್ಲಿ ಕ್ಲೀವರ್‌ಗಳು, ಮಂಡಲಾಕೃತಿ ಹಾಗೂ ಕೈಗೊಡಲಿಗಳು ಪ್ರಮುಖವಾಗಿವೆ. ಮಮದಾಪುರದಲ್ಲಿಯೂ ಇದೇ ಕಲ್ಲಿನ ಉಪಕರಣಗಳು ದೊರಕಿವೆ.[೩೫]

## ಮಧ್ಯಹಳೆಯಶಿಲಾಯುಗ :

ಈ ಕಾಲಘಟ್ಟಕ್ಕೆ ಸಂಬಂಧಿಸಿದ ಹಲವಾರು ಕುರುಹುಗಳು ದೊರಕಿವೆ. ಮಾವನೂರು, ಅರಭಾವಿ, ಕೊಳವಿ, ಕುಂದರಿಗಿ, ಬೆಣಚಿನಮರಡಿ, ಲೋಳಸೂರ, ಗುಮಚಿನಮರಡಿ, ಮಾಲದಿನ್ನಿ ಪ್ರಮುಖ ನೆಲೆಗಳಾಗಿವೆ.[೩೬] ಡಾ.ಆರ್.ಎಸ್.ಪಪ್ಪು ಹಾಗೂ ಡಾ.ಎಸ್.ಬಿ.ದೇವ್‌ರವರು ಪೂನಾದ ಡೆಕ್ಕನ್ ಕಾಲೇಜು ವತಿಯಿಂದ ಇಲ್ಲಿನ ಭೂ ಪರಿಸರ ಹಾಗೂ ಪ್ರಾಚೀನ ವಸತಿ ನೆಲೆಗಳನ್ನು ತಮ್ಮ ಅಧ್ಯಯನದ ಮೂಲಕ ಗುರುತಿಸಿದ್ದಾರೆ. ಮಾರ್ಕಂಡೇಯ ನದಿ ತೀರದ ಪ್ರದೇಶಗಳಲ್ಲಿ ಕೈಗೊಡಲಿ, ಕ್ಲೀವರ್, ಅಂಡಾಕೃತಿಯ ಉಪಕರಣಗಳು ದೊರಕಿವೆ. ಪಾಶ್ಚಾಪುರದ ಸಮೀಪದ ಗುಮಚಿನಮರಡಿಯ ಪ್ರದೇಶದಲ್ಲಿ ಕ್ಷೇತ್ರಕಾರ್ಯ ಕೈಗೊಂಡಾಗ ಹಲವಾರು ಉಪಕರಣಗಳು ದೊರಕಿವೆ. ಸಿಕ್ಕ ಉಪಕರಣಗಳನ್ನು ಅವುಗಳ ಗಾತ್ರ ಮತ್ತು ಸ್ವರೂಪದ ಆಧಾರದ ಮೇಲೆ ವಿಂಗಡಿಸಲಾಗಿದೆ. ಅವುಗಳಲ್ಲಿ ಒಂದು ಹೆರೆಯುವ ಸಾಧನ ೯ ಸೆ.ಮೀ ಉದ್ದ ಹಾಗೂ ೮ ಸೆ.ಮೀ. ಅಗಲವಿದೆ. ಕೈಗೊಡಲಿ ಹಾಗೂ ಬಾಚಿಯ ಸ್ವರೂಪದ ಉಪಕರಣ ಸು.

೧೪ ಸೆ.ಮೀ ಉದ್ದ ಹಾಗೂ ೯.೫ ಸೆ.ಮೀ ಅಗಲವಾಗಿದೆ. ಈ ಪ್ರದೇಶದಲ್ಲಿ ಹಿಂದೆ ಕೆರೆಯೊಂದಿತ್ತೆಂದು ಹೇಳಲಾಗುತ್ತದೆ. ಅಲ್ಲಿ ಅದರ ಸ್ತರಗಳು ಕಂಡುಬರುತ್ತವೆ.[೩೭]

ಇಲ್ಲಿನ ಕಲ್ಲುಗುಂಪೆಯ ಸ್ತರದಲ್ಲಿ ಶಿಲಾಯಧಗಳು ದೊರಕಿವೆ. ಈ ಸ್ತರದ ಮೇಲ್ಭಾಗದಲ್ಲಿ ಬೃಹತ್ ಶಿಲಾಯುಗದ ಗೋರಿಯೊಂದಿದೆ.[೩೮] ಹೀಗೆ ಹಳೆಯ ಶಿಲಾಯುಗ ಹಾಗೂ ಬೃಹತ್‌ಶಿಲಾಯುಗದ ಸಂಸ್ಕೃತಿಗಳು ಒಂದೇ ನೆಲೆಯಲ್ಲಿ ಈ ಪರಿಸರದಲ್ಲಿ ಕಂಡುಬರುವುದು ವಿಶೇಷವೆನ್ನಬಹುದು. ಆದಿಶಿಲಾಯುಗ ಕಾಲದಿಂದಲೂ ಇಲ್ಲಿ ಜನವಸತಿಯಿರುವುದು ಕಂಡುಬರುತ್ತದೆ. ಇಂತಹದ್ದೇ ಆಯುಧೋಪಕರಣಗಳು ಲೋಳಸೂರದ ಹತ್ತಿರದ ಘಟಪ್ರಭಾ ನದಿಗೆ ನಾಲೆಯೊಂದು ಇದ್ದು ಅದರ ಪಕ್ಕದ ಹೊಲದಲ್ಲಿ ದೊರಕಿವೆ. ಅವುಗಳಲ್ಲಿ ೧೨ ಸೆ.ಮೀ ಉದ್ದ ಹಾಗೂ ೮.೫ ಸೆ.ಮೀ ಅಳತೆಯ ಮೊನೆ ಹಾಗೂ ೧೨ ಸೆ.ಮೀ ಉದ್ದ ಹಾಗೂ ೮.೫ ಸೆ.ಮೀ. ಅಳತೆಯ ಕೈಗೊಡಲಿಯೊಂದು ಸಿಕ್ಕಿದೆ.[೩೯] ಇಲ್ಲಿ ಇಂದಿಗೂ ಜನವಸತಿಯಿರುವುದನ್ನು ನೋಡಬಹುದಾಗಿದೆ. ಈ ಪ್ರದೇಶದ ನೆಲೆಗಳಲ್ಲಿ ಆದಿಹಳೆಯ ಹಾಗೂ ಮಧ್ಯ ಹಳೆಯಶಿಲಾಯುಗದ ಸಂಸ್ಕೃತಿ ಪಸರಿಸಿರುವುದು ಕಂಡುಬರುತ್ತದೆ.

**ಅಂತ್ಯಹಳೆಯ ಶಿಲಾಯುಗ :**

ಕೊಣ್ಣೂರಿನ ಪರಿಸರದಲ್ಲಿ ಈ ಕಾಲಘಟ್ಟಕ್ಕೆ ಸಂಬಂಧಪಟ್ಟ ನೆಲೆಗಳು ವಿರಳ. ಮಾಲದಿನ್ನಿ ಮತ್ತು ಉಪ್ಪಾರಟ್ಟಿಗಳು ಪ್ರಮುಖವಾಗಿವೆ.[೪೦] ಗೋಕಾಕ್ ತಾಲೂಕಿನಲ್ಲಿರುವ ಈ ಪ್ರದೇಶಗಳು ಘಟಪ್ರಭಾ ನದಿಯ ದಕ್ಷಿಣ ಭಾಗದಲ್ಲಿ. ನದಿಯ ಮಧ್ಯದ ಪ್ರದೇಶದಲ್ಲಿ (Middle Reaches) ಹಾಗೂ ಅಂತ್ಯದ ಪ್ರದೇಶದಲ್ಲಿ (Upper Reaches) ಅಂತ್ಯಹಳೆಯ ಶಿಲಾಯುಗದ ಮಾನವನ ಸಂಸ್ಕೃತಿಯು ಬೆಳೆದುಬಂದಿರುವುದು ಕಂಡುಬರುತ್ತದೆ.

**ಸೂಕ್ಷ್ಮಶಿಲಾಯುಗ :**

ಈ ಅವಧಿಯಲ್ಲಿ ಮಾನವನ ಜೀವನ ಶೈಲಿಯಲ್ಲಿ ಬದಲಾವಣೆಯಾಗಿರುವುದು ಕಂಡುಬರುತ್ತದೆ. ದೊಡ್ಡ ಗಾತ್ರದ ಆಯುಧೋಪಕರಣಗಳ ಜೊತೆಗೆ ಸೂಕ್ಷ್ಮ ಸ್ವರೂಪದ ಉಪಕರಣಗಳನ್ನು ತಯಾರಿಸತೊಡಗಿದ. ಮಾನವ ಒಂದೆಡೆ ನೆಲೆ ನಿಲ್ಲುವ ಹಾಗೂ ಕೃಷಿಯತ್ತ ಆಸಕ್ತಿ ತೋರಿರುವುದು ಕಂಡುಬರುತ್ತದೆ. ಪಶು ಪ್ರಾಣಿಗಳನ್ನು ಬೇಟೆಯಾಡುವುದಷ್ಟೇ ಅಲ್ಲದೆ ಅವುಗಳನ್ನು ಪಳಗಿಸಿ ಸಾಕುವ ಪ್ರಯತ್ನ ಮಾಡತೊಡಗಿದ. ಕೈಯಿಂದ ಒರಟಾದ ಗಡಿಗೆ, ಮಡಿಕೆಗಳನ್ನು ಮಾಡುವುದನ್ನು ಕಲಿತನು. ಕೊಣ್ಣೂರು ಪ್ರದೇಶದಲ್ಲಿ ಹಲವಾರು ಸೂಕ್ಷ್ಮಶಿಲಾಯುಗ ಸಂಸ್ಕೃತಿಯ ಕಾಲದ ನೆಲೆಗಳು ಪತ್ತೆಯಾಗಿವೆ. ೧೮೭೬ರಲ್ಲಿ ರಾಬಟ್ ಬ್ರೂಸ್‌ಫೂಟ್ ಗೋಕಾಕ್ ಹತ್ತಿರದ ಹಳ್ಳವೊಂದರಲ್ಲಿ ಪ್ರಾಣಿಗಳ ಅವಶೇಷಗಳನ್ನು ಪತ್ತೆ ಹಚ್ಚಿದ್ದಾರೆ.[೪೧] ನದಿಗುಡಿಖೇತ್ರ ಮತ್ತು ಘೋಡಗೋರಿಯ ಸುತ್ತಮುತ್ತಲಿನ ಪ್ರದೇಶದಲ್ಲಿ ಸೂಕ್ಷ್ಮಶಿಲಾಯುಗ ಕಾಲದ ಉಪಕರಣಗಳು ದೊರಕಿವೆ.[೪೨] ಚರ್ಟ್ ಮತ್ತು ಚಾಲ್ಸಿಡನಿಯಿಂದ ಮಾಡಿದ

ಸು. ೧ ಸೆ.ಮೀ ದಿಂದ ೨.೫ ಸೆಂ.ಮೀ. ಉದ್ದದಳತೆಯ ಉಪಕರಣಗಳು ದೊರಕಿವೆ. ಈ ನೆಲೆಯಲ್ಲಿಯೇ ಬೃಹತ್‌ಶಿಲಾಗೋರಿಗಳು ಇದ್ದುದ್ದು ವಿಶೇಷವೆನ್ನಬಹುದು.

**ನವಶಿಲಾಯುಗ :**

ಈ ಘಟ್ಟ ಮಾನವನ ಸಾಂಸ್ಕೃತಿಕ ಪ್ರಗತಿಯಲ್ಲಿ ವಿಶೇಷವಾದ ಹಂತ. ಅವನ ಜೀವನ ಶೈಲಿ ಹೊಸ ರೂಪ ಪಡೆದುಕೊಂಡಿತು. ಅವನ ತಾಂತ್ರಿಕತೆ ಮತ್ತು ಕೌಶಲ್ಯಗಳು ವೃದ್ಧಿಗೊಂಡವು. ಒಂದೆಡೆ ನೆಲೆ ನಿಂತು ಜೀವಿಸುವುದನ್ನು ಕಲಿತ ಮಾನವ, ಪಶು-ಪ್ರಾಣಿಗಳನ್ನು ಸಾಕಲು ಕಲಿತ, ನಯಗೊಳಿಸಿದ ಆಯುಧೋಪಕರಣ ತಯಾರಿಸಿ, ಕೃಷಿ ಚಟುವಟಿಕೆಗಳನ್ನು ಪ್ರಾರಂಭಿಸಿದ. ವಿವಿಧ ಮಾದರಿಯ ಗಡಿಗೆ ಮಡಿಕೆಗಳನ್ನು ಚಕ್ರದ ಸಹಾಯದಿಂದ ತಯಾರಿಸುವ ತಾಂತ್ರಿಕತೆಯನ್ನು ಅಳವಡಿಸಿಕೊಂಡ. ಪಿಕ್ಲಿಹಾಳ್, ತೆಕ್ಕಲಕೊಟೆ, ಬ್ರಹ್ಮಗಿರಿ, ಹೆಮ್ಮಿಗೆ ಪ್ರಮುಖವಾದ ನವಶಿಲಾಯುಗದ ನೆಲೆಗಳಾಗಿವೆ.[೪೩] ಕೊಣ್ಣೂರಿನ ಪರಿಸರದಲ್ಲಿಯೂ ಈ ಕಾಲಘಟ್ಟದ ನೆಲೆಗಳು ಕಂಡುಬರುತ್ತವೆ. ಅವುಗಳಲ್ಲಿ ದ್ಯಾಗನಟ್ಟಿ ಮತ್ತು ಕೊಣ್ಣೂರು ಪ್ರಮುಖವಾಗಿವೆ.[೪೪] ಆದಿಶಿಲಾಯುಗದ ಕಾಲದಿಂದಲೂ ಈ ನೆಲೆ ಒಂದು ಒಂದು ರೀತಿಯಲ್ಲಿ ತನ್ನ ಪ್ರಾಧಾನ್ಯತೆಯನ್ನು ಮೆರೆದಿದೆ. ಪೂಣೆಯ ಡೆಕ್ಕನ್ ಕಾಲೇಜಿಗೆ ಸಂಶೋಧಕರಾದ ಡಾ.ಅ.ಸುಂದರರವರು ಸಲ್ಲಿಸಿದ ತಮ್ಮ ಪಿಎಚ್.ಡಿ ಮಹಾಪ್ರಬಂಧದಲ್ಲಿ ಹಲವಾರು ಹೊಸ ನೆಲೆಗಳನ್ನು ಸಂಶೋಧಿಸಿ ಅರ್ಥೈಸಿರುವ ಮಾಹಿತಿಗಳಿವೆ. ಕೊಣ್ಣೂರಿನಲ್ಲಿ ಕಂದುಬಣ್ಣದ ಕಪ್ಪು-ಕಂದು ಬಣ್ಣದ, ಮಡಿಕೆ ಚೂರುಗಳು ಲಭ್ಯವಾಗಿದ್ದು ಅವುಗಳಲ್ಲಿ ಕೆಲವನ್ನು ಅಲಂಕರಿಸಲಾಗಿದೆ. ಕಪ್ಪು ಟ್ರ್ಯಾಪ್ ಶಿಲೆಯ ಚಕ್ಕೆ, ಚಾಲ್ಸಿಡನಿಯ ದ್ವಿಮುಖ ಬ್ಲೇಡುಗಳು, ಗ್ರ್ಯಾನೈಟ್‌ನ ಒರಳು ಹಾಗೂ ಕೆಲವೊಂದು ಮೂಳೆಗಳು ಕೂಡ ದೊರಕಿವೆ. ಜೋರ್ವೆ ಸಂಸ್ಕೃತಿಯ ಮಾದರಿಯ ಅರ್ಧಚಂದ್ರಾಕೃತಿ, ಟ್ರಾಪಿಜ್ ಉಪಕರಣ ಹಾಗೂ ಕಪ್ಪು ಬಣದಿಂದ ಮಾಡಿದ ಕೆಂಪುಗಡಿಗೆ ಮಡಿಕೆಗಳು ಸಿಕ್ಕಿರುವುದು ವಿಶೇಷ. ಪಾಶ್ಚಾಪುರದಿಂದ ಪಶ್ಚಿಮಕ್ಕೆ ಸು. ೪ ಕಿ.ಮೀ ದೂರದಲ್ಲಿನ ಮಾವನೂರಿನಲ್ಲಿ ಮಾರ್ಕಂಡೇಯ ನದಿ ತೀರದಲ್ಲಿ ಪ್ರಾಚೀನತೆಯ ವಸತಿನೆಲೆಯಿರುವುದು ಕಂಡುಬರುತ್ತದೆ. ಸು.೮-೧೦ ಎಕರೆಯ ಭೂಪ್ರದೇಶವೆಲ್ಲ ಬೂದು ಮಣ್ಣಿನಿಂದ ಕೂಡಿದೆ. ಇದೇ ಜಾಗೆಯಲ್ಲಿ ರಾಷ್ಟ್ರಕೂಟ ಆಡಳಿತಾವಧಿ ಕೊನೆಗಾಲದ ಸಂದರ್ಭದಲ್ಲಿ ನಿರ್ಮಿಸಿದ ಆದರೆ ಸದ್ಯ ಶಿಥಿಲವಾಗಿರುವ ಬಸವಣ್ಣನ ದೇವಾಲಯವೊಂದಿದೆ. ಸ್ಥಳೀಯರು ಈ ಪ್ರದೇಶವನ್ನು ಹಳೆಯ ಮಾವನೂರು ಅಥವಾ ಹೊನ್ನಿನ ಮಾವನೂರು ಎಂದು ಕರೆಯುವರು.

ಕೊಣ್ಣೂರಿನಲ್ಲಿ ಘಟಪ್ರಭಾ ನದಿಯ ಮೇಲ್ಭಾಗದಲ್ಲಿ ಬೂದಿದಿಬ್ಬವೊಂದು ಕಂಡುಬರುತ್ತಿದ್ದು ಅದು ಸದ್ಯ ಹಾಳಾಗಿದೆ.[೪೫] ಕೊಣ್ಣೂರು ಪರಿಸರದಲ್ಲಿ ಬೃಹತ್‌ಶಿಲಾ ಸಂಸ್ಕೃತಿಗೆ ಸೇರಿದ ಕುರುಹುಗಳು ಲಭ್ಯವಾಗಿವೆ. ಉತ್ತರ ಕರ್ನಾಟಕದಲ್ಲಿ ಮೊಟ್ಟಮೊದಲ ಬಾರಿಗೆ ಬೃಹತ್‌ಶಿಲಾಸಂಸ್ಕೃತಿಯ ಕುರಿತು ಅಧ್ಯಯನ ಮಾಡಿದವರೆಂದರೆ ಡಾ.ಅ.ಸುಂದರರವರು.[೪೬] ಆದರೆ ಇಡೀ ಕರ್ನಾಟಕದಲ್ಲಿಯೇ ಮೊಟ್ಟಮೊದಲ ಬಾರಿಗೆ ಬೃಹತ್‌ಶಿಲಾಯುಗದ ಬಗ್ಗೆ ವರದಿ ಮಾಡಿದವರೆಂದರೆ ಮೀಡೋಸ್ ಟೋಲರ್. ಇವರು

ಬಳ್ಳಾರಿ, ಗುಲ್ಬರ್ಗಾ ಹಾಗೂ ರಾಯಚೂರು ಜಿಲ್ಲೆಗಳಲ್ಲಿನ ಬೃಹತ್‌ಶಿಲಾ ಗೋರಿಗಳ ಕುರಿತು ಅನ್ವೇಷಣೆ ಕೈಗೊಂಡರು. ಅದೇ ರೀತಿ ಜೇಮ್ಸ್ ಬರ್ಗೆಸ್‌ರವರು ಕೊಣ್ಣೂರು ಹಾಗೂ ಐಹೊಳೆಯ ಬೃಹತ್‌ಶಿಲಾ ಗೋರಿಗಳ ಕುರಿತು ವರದಿ ಮಾಡಿರುವರು.[೪೬] ಕೊಣ್ಣೂರಿನ ಪರಿಸರದಲ್ಲಿ ನದಿಗುಡಿಕ್ಷೇತ್ರ, ನಿರ್ವಾಣಹಟ್ಟಿ, ಸಾವಳಗಿ, ಹಿಡಕಲ್, ಹುನೂರು, ಘೋಡಗೇರಿ, ಕೊಣ್ಣೂರು, ಕುಂದರಗಿ, ಗೊಡಚಿನಮಲ್ಕಿ, ಗುಮಚಿನಮರಡಿ[೪೮] ಮುಂತಾದ ಕಡೆ ಬೃಹತ್‌ಶಿಲಾ ಸಂಸ್ಕೃತಿಯ ಕಾಲದ ಗೋರಿಗಳನ್ನು ಕಾಣಬಹುದು. ಪ್ರಾಗಿತಿಹಾಸ ಕಾಲದ ಅವಧಿಯಲ್ಲಿ ನಿರ್ಮಿತವಾದ ಶಿಲಾಗೋರಿಗಳು ಆ ಸಂಸ್ಕೃತಿಯ ಪ್ರತೀಕಗಳಾಗಿವೆ. ಆದರೆ ಇಂದು ಅವು ಆಧುನಿಕ ಮಾನವನ ಚಟುವಟಿಕೆಗಳಿಂದ ನಾಶಗೊಳ್ಳುತ್ತಿವೆ. ಕೆಲವರು ನಿಧಿಗಾಗಿ, ಇನ್ನೂ ಕೆಲವರು ಗಣಿಗಾರಿಕೆಗಾಗಿ ಹಾಳುಮಾಡುತ್ತಿದ್ದಾರೆ. ಕೆಲವು ಕಡೆ ಅವನ್ನು ಪ್ರಾಚೀನ ಕಾಲದ ದೇವಾಲಯವೆಂದು ಪೂಜಿಸುತ್ತಾರೆ. ಧಾರ್ಮಿಕ ಕುರುಹುಗಳಾಗಿ ಪರಿಗಣಿಸಿ, ಮತ್ತೆ ಕೆಲವರು ಅವುಗಳನ್ನು ಪೂಜಿಸುತ್ತಾರೆ. ಕೊಣ್ಣೂರು ಪರಿಸರದಲ್ಲಿರುವ ಬೃಹತ್‌ಶಿಲಾ ಗೋರಿಗಳನ್ನು ಜನರು ಜೈನಮುನಿಗಳು ತಪಸ್ಸು ಮಾಡಿದ ಗುಹೆ (ಗುಂಫಾ)ಗಳೆಂದು ಪರಿಭಾವಿಸಿದ್ದಾರೆ. ಜನಸಾಮಾನ್ಯರು ಪಾಂಡವರ ಮನೆಗಳೆಂದು ಕರೆಯುತ್ತಾರೆ. ಕ್ರಿ.ಪೂ. ೧೦ನೆಯ ಶತಮಾನದಲ್ಲಿ ಪ್ರಾರಂಭವಾದ ಈ ನಾಗರಿಕತೆ ಕ್ರಿ.ಶ. ೨ನೆಯ ಶತಮಾನದವರೆಗೂ ಮುಂದುವರಿಯಿತು. ಬಹುಶ ಈ ಕಾಲದಲ್ಲಿ ಮಹಾಭಾರತದ ಘಟನೆಗಳು ಸಂಭವಿಸಿರುವ ಸಾಧ್ಯತೆಗಳಿವೆ. ಈ ಹಿನ್ನೆಲೆಯಲ್ಲಿ ಪಾಂಡವರಿಗೆ ಸಂಬಂಧಿಸಿದಂತೆ ಇವುಗಳೊಡನೆ ಸ್ಥಳೀಯರು ಸಂಬಂಧ ಕಲ್ಪಿಸಿದ್ದಾರೆ.

ಹುಕ್ಕೇರಿಯಿಂದ ಆಗ್ನೇಯಕ್ಕೆ ೧೦ ಕಿ.ಮೀ ದೂರದಲ್ಲಿರುವ ಘೋಡಗೇರಿಯಲ್ಲಿ ಬೃಹತ್‌ಶಿಲಾಯುಗದ ಹಲವಾರು ಸ್ಮಾರಕಗಳಿವೆ. ಬಹುತೇಕ ಹಾದಿಕೋಣೆಯ ಗೋರಿಗಳು. ಅವನ್ನು ಸ್ಥಳೀಯವಾಗಿ ಲಭ್ಯವಿರುವ ಮರುಳುಶಿಲೆ, ಡೆಕ್ಕನ್ ಟ್ರಾಪ್, ಕಾಂಗ್ಲೋಮರೇಟ್ ಹಾಗೂ ಲ್ಯಾಟ್‌ರೈಟ್ ಶಿಲೆಗಳಿಂದ ನಿರ್ಮಿಸಿದ್ದಾರೆ. ಕೆಲವು ಚೌಕಾಕಾರವಾಗಿದ್ದರೆ, ಕೆಲವು ಆಯತಾಕಾರವಾಗಿವೆ. ಬಹುತೇಕ ಸ್ಮಾರಕಗಳ ಮುಖ ದಕ್ಷಿಣಾಭಿಮುಖವಾಗಿದ್ದು ಕನಿಷ್ಟ ನಾಲ್ಕರಿಂದ ಎಂಟು ಚಪ್ಪಡಿಗಳಿಂದ ನಿರ್ಮಾಣ ಮಾಡಲಾಗಿದೆ. ೬ ಕಲ್ಲು ಚಪ್ಪಡಿಗಳನ್ನು ಲಂಬವಾಗಿ ನಿಲ್ಲಿಸಿ ಮೇಲೆ ಟೋಪಿಕಲ್ಲನ್ನು ಹಾಕಲಾಗುತ್ತದೆ. ಮುಂಭಾಗದಲ್ಲಿ ಸ್ವಲ್ಪ ಜಾಗಬಿಟ್ಟು (ಸು. ಒಂದರಿಂದ ಎರಡು ಅಡಿ) ಎರಡೂ ಪಾರ್ಶ್ವದಲ್ಲಿ ಅಡ್ಡಲಾಗಿ ಕಲ್ಲುಗಳನ್ನು ಜೋಡಿಸಿರುತ್ತಾರೆ. ಅವುಗಳ ಮುಂದೆ ೨ ರಿಂದ ೪ ಕಲ್ಲು ಚಪ್ಪಡಿಗಳನ್ನು ಇಬ್ಬದಿಯಲ್ಲಿ ನಿಲ್ಲಿಸಿರುತ್ತದೆ. ಅವುಗಳ ಮಧ್ಯ ಹಾದಿಯನ್ನು ಬಿಟ್ಟಿರುತ್ತಾರೆ. ಇವೇ ಹಾದಿಕೋಣೆ ಸ್ಮಾರಕಗಳು. ಇವುಗಳ ಸುತ್ತ ಕಲ್ಲುಗುಂಡುಗಳಿಂದ ಗುಂಪೆ ಮಾಡಿರುವುದು ಕಂಡುಬರುತ್ತದೆ. ಕೆಲವು ಗೋರಿಗಳ ಸುತ್ತು ಕಲ್ಲು ಚಪ್ಪಡಿಗಳನ್ನು ವೃತ್ತಕಾರವಾಗಿ ಜೋಡಿಸಿ ಕೌಶಲ್ಯವನ್ನು ಮೆರೆದಿದ್ದಾರೆ. ಇಲ್ಲಿರುವ ಒಂದು ಹಾದಿ ಕೋಣೆಯ ಗೋರಿಯನ್ನು ೭ ಕಲ್ಲು ಚಪ್ಪಡಿಯಿಂದ ನಿರ್ಮಿಸಿದ್ದಾರೆ. ೪.೬ ಅಡಿ ಉದ್ದ ಹಾಗೂ ೪.೮ ಅಡಿ ಅಗಲವಾಗಿದೆ. ಅದರ ಮೇಲೆ ೪.೬ ಅಡಿ ಅಗಲ ಹಾಗೂ ೫ ಅಡಿ ಉದ್ದದ ಟೋಪಿಕಲ್ಲಿದೆ.

ಇಲ್ಲಿಯೇ ಸು. ೧೧ ಅಡಿ ಉದ್ದ ಹಾಗೂ ೮.೪ ಅಡಿ ಉದ್ದದ ಶಿಥಿಲಾವಸ್ಥೆಯ ಶಿಲಾಗೋರಿಯೊಂದಿದ್ದು ಈಗ ಸದ್ಯದಲ್ಲಿ ೬ ಕಲ್ಲು ಚಪ್ಪಡಿಗಳು ಮಾತ್ರವಿದ್ದು ಉಳಿದವು ಹಾಳಾಗಿವೆ. ಅಲ್ಲಿ ಟೋಪಿಕಲ್ಲು ಇಲ್ಲ. ಇದರ ಸುತ್ತಮುತ್ತ ಕಲ್ಲುಗುಂಡುಗಳನ್ನು ಹಾಕಲಾಗಿದ್ದು ಅದರ ಹೊರಭಾಗದಲ್ಲಿ ಕಲ್ಲು ಚಪ್ಪಡಿಗಳನ್ನು ವೃತ್ತಾಕಾರವಾಗಿ ಅಡ್ಡಲಾಗಿ ಜೋಡಿಸಲಾಗಿದ್ದು. ಇದೊಂದು ವೃತ್ತ ಹೊಂದಿರುವ ಹಾದಿ ಕೋಣೆಯ ಶಿಲಾಗೋರಿಯಾಗಿದ್ದು ಇದರ ವೃತ್ತದ ವ್ಯಾಸ ೫೦ ಅಡಿಯಿರುವುದು ಕಂಡುಬರುತ್ತದೆ. ಇಲ್ಲಿಯೇ ಚಿಕ್ಕಮಕ್ಕಳದೆನ್ನಬಹುದಾದ ಹತ್ತಾರು ಶಿಥಿಲವಾದ ಶಿಲಾಗೋರಿಗಳಿವೆ. ಇಲ್ಲಿ ಗಣಿಗಾರಿಕೆ ನಡೆಯುತ್ತಿದ್ದು, ಇದ್ದ ಕೆಲವೇ ಸ್ಮಾರಕಗಳು ಕೂಡ ಹಾಳಾಗುವ ಸ್ಥಿತಿಯುಂಟಾಗಿದೆ.

ಕೊಣ್ಣೂರಿನಿಂದ ದಕ್ಷಿಣಕ್ಕೆ ೧೦ ಕಿ.ಮೀ ದೂರದಲ್ಲಿರುವ ಗೊಡಚಿನಮಲ್ಕಿಯಲ್ಲಿಯೂ ಕೂಡ ಹಲವಾರು ಬೃಹತ್‌ಶಿಲಾ ಸಮಾಧಿಗಳಿದ್ದು, ಅವುಗಳಲ್ಲಿ ಬಹುತೇಕ ಹಾಳಾಗಿವೆ. ಮಾರ್ಕಂಡೇಯ ನದಿಯು ಹಲವಾರು ತಿರುವುಗಳನ್ನು ಪಡೆಯುತ್ತ ಬಂದು ಸುಮಾರು ೬೦೦-೭೦೦ ಮೀ ಸಮತಟ್ಟಾಗಿ ಹರಿಯುತ್ತ ಒಮ್ಮೆಲೆ ಸುಮಾರು ೬೦ ಅಡಿ ಆಳಕ್ಕೆ ನೀರು ರಭಸವಾಗಿ ಧುಮುಕುತ್ತದೆ. ಹೀಗಾಗಿ ಇಲ್ಲೊಂದು ಸುಂದರವಾದ ಜಲಪಾತ ನಿರ್ಮಾಣವಾಗಿದೆ. ಇದನ್ನು ಸ್ಥಳೀಯರು ತಡಸಲು ಎಂದು ಕರೆಯುತ್ತಾರೆ. ಜಲಪಾತದ ಬಲಬದಿಯಲ್ಲಿ ಒಂದು ಡೋಲ್‌ಮೆನ್ ಇದೆ. ಅದನ್ನು ೭ ಕಲ್ಲು ಚಪ್ಪಡಿಗಳಿಂದ ನಿರ್ಮಿಸಲಾಗಿದ್ದು, ಇದಕ್ಕೆ ೮ ಇಡಿ ಉದ್ದ ಹಾಗೂ ೭ ಅಡಿ ಅಗಲದ ಅಳತೆಯ ಟೋಪಿಕಲ್ಲಿದೆ. ಅದರಲ್ಲಿ ಸದ್ಯ ಪೂಜಿಸಲ್ಪಡುವ ಸೂರ್ಯನ ನಿಂತ ವಿಗ್ರಹ (ಖಡ್ಗಾಸನ) ಹಾಗೂ ಶಿವಲಿಂಗವಿದೆ.

ಇಡೀ ದಕ್ಷಿಣ ಭಾರತದಲ್ಲಿಯೇ ಹಾದಿ ಕೋಣೆ ಗೋರಿಗಳ ಮಾದರಿಗೆ ಪ್ರಸಿದ್ಧಿಯಾದ ಕೊಣ್ಣೂರಿನಲ್ಲಿ ನೂರಾರು ಬೃಹತ್‌ಶಿಲಾಯುಗದ ಸ್ಮಾರಕಗಳಿವೆ. ಆದರೆ ಅವುಗಳಲ್ಲಿ ಸುಸ್ಥಿತಿಯಲ್ಲಿರುವುದು ಕೇವಲ ೭-೮ ಮಾತ್ರ. ಸ್ಮಾರಕಗಳಿರುವ ಪ್ರದೇಶವನ್ನು ಜನರು ಕೃಷಿಕಾರ್ಯಗಳಿಗೆ ಬಳಸಿಕೊಂಡಿದ್ದರಿಂದ ಅವು ಹೆಚ್ಚಾಗಿ ಕ್ಷೀಣಿಸುತ್ತಾ ಹೋಗುತ್ತಿವೆ. ಕೆಲವರು ಹಣದ ಆಸೆಗಾಗಿ ಅಗೆದಿದ್ದಾರೆ. ಒಂದು ಕಡೆ ಮಾತ್ರ ಅದನ್ನು 'ಪಡೆವ್ವ' ಎಂದು ಕರೆದು ಪೂಜಿಸುತ್ತಿದ್ದಾರೆ. ಕೊಣ್ಣೂರಿಂದ ಮೇಲ್ಮಟ್ಟಿಗೆ ಹೋಗುವ ಕಾಲುದಾರಿಯ ಬಲ ಮತ್ತು ಎಡ ಪಾರ್ಶದಲ್ಲಿ ಹಲವಾರು ಸ್ಮಾರಕಗಳಿವೆ. ಭಾರತೀಯ ಪುರಾತತ್ವ ಇಲಾಖೆಯವರು ಕೆಲವು ಹಾದಿಕೋಣೆ ಗೋರಿಗಳನ್ನು ರಕ್ಷಿಸಿದ್ದಾರೆ. ಚೌಗಲೆಯವರ ಹೊಲದಲ್ಲಿರುವ ಡೊಲಮನ್ ೮.೬ ಅಡಿ ಅಗಲ ಹಾಗೂ ೭.೧೧ ಅಡಿ ಉದ್ದವಾಗಿದೆ. ಇಷ್ಟೇ ಅಳತೆಯ ಟೋಪಿಕಲ್ಲು ಇದರ ಮೇಲಿದೆ. ಸ್ಥಳೀಯರು ಇದಕ್ಕೆ 'ಪಡೆವ್ವ' ಎಂದು ಕರೆದು ಪೂಜಿಸುತ್ತಾರೆ. ಇನ್ನಿತರ ಎಲ್ಲಾ ಬೃಹತ್‌ಶೀಲಾಯುಗಗಳನ್ನು ಜೈನಮುನಿಗಳು ತಪಸ್ಸು ಮಾಡಿದ ಗುಂಫಾ ಎಂದು ಕರೆಯುವರು. ಅಲ್ಲಿನ ಬೊರ್ಗಲ್ಲೆ ಶಿವಪ್ಪ ಹಾಗೂ ಅಶೋಕ ಪಾಟೀಲ ಎಂಬುವರ ಹೊಲದಲ್ಲಿ ೨೦-೨೫ ಸ್ಮಾರಕಗಳಿವೆ. ಎಲ್ಲವೂ ಶಿಥಿಲವಾಗಿವೆ. ಇಲ್ಲಿಯೇ ಭಾರತೀಯ ಪುರಾತತ್ವ ಇಲಾಖೆಯವರು ಸು. ೨ ಎಕರೆ ಪ್ರದೇಶದಲ್ಲಿ ಕೆಲವೊಂದು ಸ್ಮಾರಕಗಳನ್ನು ರಕ್ಷಿಸಿದ್ದಾರೆ. ಅವುಗಳಲ್ಲಿ ಒಂದು ದೊಡ್ಡ ಹಾದಿಕೋಣೆಯಿದ್ದು ಅದು ೯

ಅಡಿ ಉದ್ದ ಹಾಗೂ ೮ ಅಡಿ ಅಗಲದ ಟೋಪಿಕಲ್ಲನ್ನು ಹೊಂದಿದೆ. ನೆಲಮಟ್ಟದಿಂದ ಸು. ೨.೫ ಅಡಿ ಆಳ ಹೊಂದಿದ್ದು ನೆಲದ ಮೇಲೆ ೩ ಅಡಿಯಷ್ಟು ಎತ್ತರವಿದೆ. ಹಾದಿಯಲ್ಲಿ (Passage) ಜೋಡಿಸಿರುವ ೨ ಕಲ್ಲುಗಳು ೪ ಅಡಿ ಉದ್ದವಾಗಿವೆ. ಈ ಸ್ಮಾರಕವನ್ನು ಪುರಾತತ್ವ ಇಲಾಖೆಯವರು ನವೀಕರಣಗೊಳಿಸಿದ್ದಾರೆ. ಇದರ ಎಡಪಾರ್ಶ್ವದಲ್ಲಿಯೇ ದಕ್ಷಿಣಾಭಿಮುಖವಾದ ಮತ್ತೊಂದು ದೊಡ್ಡದಾದ ಶಿಲಾಗೋರಿಯಿದೆ. ಅದು ಒಟ್ಟು ೧೧ ಅಡಿ ಉದ್ದ ಹಾಗೂ ೭.೬ ಅಡಿ ಅಗಲವಾಗಿವೆ. ಅದರ ಟೋಪಿಕಲ್ಲು ೭.೬ ಅಡಿ ಉದ್ದ ೫ ಅಡಿ ಅಗಲವಿದೆ. ಮುಂಭಾಗದಲ್ಲಿ ಹಾದಿಗೆ (Passage) ಹಾಕಿದ ಕಲ್ಲು ಚಪ್ಪಡಿಗಳು ೬ ಅಡಿ ಉದ್ದವಾಗಿದೆ. ಶಿಲಾಗೋರಿಯ ೩ ಪಾರ್ಶ್ವಗಳಲ್ಲಿನ ಚಪ್ಪಡಿಗಳು ೭ ಅಡಿ ಉದ್ದ ಹಾಗೂ ೩ ಅಡಿ ಅಗಲವಿದೆ. ಮುಂಭಾಗದಲ್ಲಿ ಸು. ೩.೫ ಅಡಿ ಅಗಲದ ಎರಡು ಕಲ್ಲುಗಳನ್ನು ಆಣಿಸಿದ್ದಾರೆ. ಮಧ್ಯದಲ್ಲಿ ದಾರಿಯನ್ನು ಬಿಡಲಾಗಿದ್ದು ಸ್ಮಾರಕವು ನೆಲದ ಮಟ್ಟದಿಂದ ಸು. ೨.೬ ಅಡಿ ಆಳ ಹಾಗೂ ನೆಲದ ಮೇಲ್ಭಾಗದಲ್ಲಿ ೩ ಅಡಿ ಎತ್ತರವಿದೆ. ಇದರ ಪಕ್ಕದಲ್ಲಿಯೇ ಚಿಕ್ಕ ಗಾತ್ರದ ಮಕ್ಕಳ ಸಮಾಧಿಗಳಿವೆ. ಅವುಗಳ ಸುತ್ತ ಕಲ್ಲು ವೃತ್ತವನ್ನು ಮಾಡಿರುವುದು ಅಸ್ಪಷ್ಟವಾಗಿ ಕಾಣುತ್ತದೆ. ಪಾಶ್ಚಾಪೂರದಿಂದ ವಾಯುವ್ಯಕ್ಕೆ ಸು. ೪ ಕಿ.ಮೀ ದೂರದ ಗುಮಚಿನಮರಡಿಯಲ್ಲಿ ಹಲವಾರು ಶಿಥಿಲವಾದ ಬೃಹತ್‌ಶಿಲಾ ಸಮಾಧಿಗಳಿವೆ. ಕೆಲವೇ ಕೆಲವು ಮಾತ್ರ ಸುಸ್ಥಿತಿಯಲ್ಲಿದೆ. ಪಾಶ್ಚಾಪೂರದಿಂದ ಗೊಡಚಿನಮಲ್ಕಿಗೆ ಹೋಗುವ ಮಾರ್ಗದ ರಸ್ತೆಯ ಎಡಪಾರ್ಶ್ವದ ಹೊಲದಲ್ಲಿವೆ. ಶಿಥಿಲಗೋರಿಯೊಂದು ಇದೆ. ಅದು ಸು. ೧೦ ಅಡಿ ಉದ್ದ ಹಾಗೂ ೬ ಅಡಿ ಅಗಲವಾಗಿದ್ದು, ದಕ್ಷಿಣಾಭಿಮುಖವಾಗಿದೆ. ಟೋಪಿಕಲ್ಲು ಕಂಡುಬರುವುದಿಲ್ಲ. ಮೂರು ಪಾರ್ಶ್ವದಲ್ಲಿ, ಮುಂಭಾಗದಲ್ಲಿ ಹಾಗೂ ಹಾದಿಯಲ್ಲಿ (Passage) ಹಾಕಿರುವ ಕಲ್ಲುಗಳು ಕಂಡುಬರುತ್ತವೆ. ಸುತ್ತಲೂ ಕಲ್ಲುಗುಪ್ಪೆಯಿದೆ. ಇದರ ಸುತ್ತಮುತ್ತ ಹತ್ತಾರು ಶಿಥಿಲವಾದ ಸ್ಮಾರಕಗಳು ಇವೆ. ಇದರ ಸಮೀಪದ ಮತ್ತೊಂದು ಹೊಲದಲ್ಲಿ ಸು. ೬ ಅಡಿ ಉದ್ದ ಹಾಗೂ ೫.೫ ಅಡಿ ಅಗಲದ ಮತ್ತೊಂದು ಸಮಾಧಿ ಇದ್ದು ದಕ್ಷಿಣಾಭಿಮುಖವಾಗಿದೆ. ಇಷ್ಟೇ ಅಳತೆಯ ಟೋಪಿಕಲ್ಲು ಇದಕ್ಕಿದೆ. ಸುತ್ತಲೂ ೩ ಚಪ್ಪಡಿ ಹಾಗೂ ಮುಂಭಾಗದಲ್ಲಿ ೨ ಕಲ್ಲು ಚಪ್ಪಡಿಗಳನ್ನು ದಾರಿಬಿಟ್ಟು (Passage) ಆಣಿಸಿದ್ದಾರೆ. ಆದರೆ ಇಲ್ಲಿ ದಾರಿಯಲ್ಲಿ (Passage) ಹಾಕಿರಬಹುದಾದ ಕಲ್ಲುಗಳನ್ನು ಹಾಳು ಮಾಡಲಾಗಿದೆ. ವಿಶೇಷವೆಂದರೆ ಈ ಬೃಹತ್‌ಶಿಲಾ ಸಮಾಧಿಯ ಕೆಳಗಿನ ಸ್ತರದಲ್ಲಿ ಹಳೆಯ ಶಿಲಾಯುಗದ ಜನವಸತಿ ನೆಲೆಯಿರುವುದು ಕಂಡುಬರುತ್ತದೆ. ಸರ್ಕಾರ ಹೊಲವೊಂದರಲ್ಲಿ ನಾಲೆ ತೋಡಿದ್ದು ಅಲ್ಲಿ ಸ್ತರಗಳು ಸ್ಪಷ್ಟವಾಗಿ ಕಾಣುತ್ತವೆ. ಈ ಪ್ರದೇಶದಲ್ಲಿ ಇಂದಿಗೂ ಜನವಸತಿ ಇರುವುದು ಕಂಡುಬರುತ್ತದೆ. ಇಲ್ಲಿ ಹಿಂದೆ ಕೆರೆಯೊಂದು ಇತ್ತು ಎನ್ನುವುದು ಸ್ಥಳೀಯರು ತಿಳಿಸುತ್ತಾರೆ. ಇಲ್ಲಿನ ಬೃಹತ್‌ಶಿಲಾ ಸಮಾಧಿಗಳಿಗೆ ಜನರು 'ಪಾಂಡವರಗುಡಿ' ಎಂದು ಕರೆಯುತ್ತಾರೆ. ಒಟ್ಟಾರೆಯಾಗಿ ಈ ಪ್ರದೇಶ ಪ್ರಾಚೀನ ಕಾಲದಿಂದಲೂ ಜನವಸತಿಯಿಂದ ಕೂಡಿತ್ತೆನ್ನಲು ಇಲ್ಲಿ ಸಿಕ್ಕ ಸ್ಮಾರಕಗಳೇ ಸಾಕ್ಷಿ. ಸಾವಳಗಿಯಲ್ಲಿಯೂ ಇಂತಹ ಹಲವಾರು ಸ್ಮಾರಕಗಳಿವೆ. ಅವು ಕೂಡ ಬಹುತೇಕ ಹಾಳಾಗಿವೆ. ಅಲ್ಲಿನ ಸ್ಥಳೀಯ ಸ್ಮಶಾನದಲ್ಲಿ ಇಂತಹ ಹತ್ತಾರು ಸಮಾಧಿಗಳು ಕಂಡುಬರುತ್ತವೆ. ಹಳೆಯ ಗೋರಿಗಳನ್ನು ತೆಗೆದು ಹೊಸದಾದ ಸಮಾಧಿಗಳನ್ನು

ನಿರ್ಮಿಸುತ್ತಿದ್ದಾರೆ. ಹಿಡಕಲ್ ಡ್ಯಾಂ ಸಮೀಪದ ನಿರ್ವಾಣಹಟ್ಟಿಯಲ್ಲಿ ಕೂಡ ಬೃಹತ್‌ಶಿಲಾಯುಗದ ಸ್ಮಾರಕಗಳಿವೆ. ಬಹುತೇಕ ಹಾಳಾಗಿವೆ. ಹಾದಿಕೋಣೆ ಮತ್ತು ಶಿಲಾವೃತ್ತಗಳೇ ಹೆಚ್ಚು. ಹಿಡಕಲ್ ಡ್ಯಾಂನ ಪರಿವೀಕ್ಷಣಾ ಮಂದಿರದ ಆವರಣದಲ್ಲಿ, ಡ್ಯಾಂನಿಂದ ಮುಳುಗಿದ ಕೆಲವು ಹಳ್ಳಿಗಳ ಹಾದಿಕೋಣೆ ಹಾಗೂ ಶಿಲಾವೃತ್ತಗಳನ್ನು ತಂದು ಪುನಃ ರಚಿಸಿದ್ದಾರೆ (ಪ್ರತಿಕೃತಿ). ಕೊಣ್ಣೂರು ಪರಿಸರದ ಬಹುತೇಕ ಗೋರಿಗಳನ್ನು ಕ್ವಾರ್ಟ್‌ಜೈಟ್, ಮರುಳುಶಿಲೆ, ಡೆಕ್ಕನ್‌ಟ್ರಾಪ್, ಕಾಂಗ್ಲೋಮರೇಟ್, ಲ್ಯಾಟರೈಟ್ ಶಿಲೆಗಳಿಂದ ನಿರ್ಮಿಸಿರುವುದು ಕಂಡುಬರುತ್ತದೆ. ಈ ಮಾದರಿಯ ಶಿಲೆಗಳೆಲ್ಲ ಕೊಣ್ಣೂರಿನ ಪರಿಸರದಲ್ಲಿ ಲಭ್ಯವಿರುವಂತಹವು.

**ಅಡಿಟಿಪ್ಪಣಿಗಳು**

೧. **ಸೂರ್ಯನಾಥ ಕಾಮತ್, ಬೆಳಗಾವಿ ಗೆಜೆಟಿಯರ್,** ಪುಟ ೫೪

೨. ಪಪ್ಪು ಆರ್.ಎಸ್, **ಆರ್ಕಿಯಾಲಜಿ ಆಫ್ ಕರ್ನಾಟಕ,** ಪುಟ ೧೭

೩. **ಕರ್ನಾಟಕ ಚರಿತ್ರೆ** ಸಂ. ೧, ಪುಟ

೪. ಪಪ್ಪು ಆರ್.ಎಸ್. ಮತ್ತು ದೇವ್ ಎಸ್.ಜಿ. **ಮ್ಯಾನ್-ಲ್ಯಾಂಡ್ ರಿಲೇಶನ್‌ಶಿಪ್ ಡ್ಯುರಿಂಗ್ ಪೆಲಿಯೋಲಿಥಿಕ್ ಟೈಮ್ಸ್ ಇನ್ ಕಲಾದಗಿ ಬೇಸಿನ್**

೫. ಪಪ್ಪು ಆರ್.ಎಸ್, **ಆರ್ಕಿಯಾಲಜಿ ಆಫ್ ಕರ್ನಾಟಕ,** ಪುಟ ೧೭

೬. ಪಪ್ಪು ಆರ್.ಎಸ್, ಮತ್ತು ದೇವ್ ಎಸ್.ಬಿ, **ಪೇಲಿಯೋಲಿಥಿಕ್ ಟೈಮ್ಸ್ ಇನ್ ಕಲಾದಗಿ ಬೆಸಿನ್,** ಪುಟ ೭

೭. ಕ್ಯಾಂಬೆಲ್, **ಬೆಳಗಾಮ್ ಗೆಜೆಟಿಯರ್,** ಪುಟ ೧೮

೮. ಪಪ್ಪು ಆರ್.ಎಸ್, **ಆರ್ಕಿಯಾಲಜಿ ಆಫ್ ಕರ್ನಾಟಕ,** ಪುಟ ೧೮

೯. ಪಪ್ಪು ಆರ್.ಎಸ್, ಮತ್ತು ದೇವ್ ಎಸ್.ಬಿ, **ಪೇಲಿಯೋಲಿಥಿಕ್ ಟೈಮ್ಸ್ ಇನ್ ಕಲಾದಗಿ ಬೆಸಿನ್,** ಪುಟ ೭

೧೦. ಕ್ಯಾಂಬೆಲ್, **ಬೆಳಗಾಮ್ ಗೆಜೆಟಿಯರ್,** ಪುಟ ೧೮

೧೧. ಕ್ಯಾಂಬೆಲ್, **ಬೆಳಗಾಮ್ ಗೆಜೆಟಿಯರ್,** ಪುಟ ೧೯

೧೨. ಪಪ್ಪು ಆರ್.ಎಸ್, ಮತ್ತು ದೇವ್ ಎಸ್.ಬಿ, **ಪೇಲಿಯೋಲಿಥಿಕ್ ಟೈಮ್ಸ್ ಇನ್ ಕಲಾದಗಿ ಬೆಸಿನ್,** ಪುಟ ೭

೧೩. ಕ್ಯಾಂಬೆಲ್, **ಬೆಳಗಾಮ್ ಗೆಜೆಟಿಯರ್,** ಪುಟ ೨೦

೧೪. ಕ್ಯಾಂಬೆಲ್, ಬೆಳಗಾಮ್ ಗೆಜೆಟಿಯರ್, ಪುಟ ೨೭

೧೫. ಪಪ್ಪು ಆರ್.ಎಸ್, ಆರ್ಕೆಯಾಲಜಿ ಆಫ್ ಕರ್ನಾಟಕ, ಪುಟ ೧೮

೧೬. ಗೋಕಾವಿ ಸಿರಿಸಂಪದ ಪುಟ ೧೬

೧೭. ಪಪ್ಪು ಆರ್.ಎಸ್, ಮತ್ತು ದೇವ್ ಎಸ್.ಬಿ, ಪೇರಿಯೋಲಿಫಿಕ್ ಟೈಮ್ಸ್ ಇನ್ ಕಲಾದಗಿ ಬೆಸಿನ್, ಪುಟ ೯

೧೮. ಕ್ಯಾಂಬೆಲ್, ಬೆಳಗಾಮ್ ಗೆಜೆಟಿಯರ್, ಪುಟ ೩೫-೩೬

೧೯. ಪಪ್ಪು ಆರ್.ಎಸ್, ಮತ್ತು ದೇವ್ ಎಸ್.ಬಿ, ಪೇಲಿಯೋಲಿಥಿಕ್ ಟೈಮ್ಸ್ ಇನ್ ಕಲಾದಗಿ ಬೆಸಿನ್, ಪುಟ ೫೯

೨೦. ಪಪ್ಪು ಆರ್.ಎಸ್, ಮತ್ತು ದೇವ್ ಎಸ್.ಬಿ, ಪೇಲಿಯೋಲಿಥಿಕ್ ಟೈಮ್ಸ್ ಇನ್ ಕಲಾದಗಿ ಬೆಸಿನ್, ಪುಟ ೫೯

೨೧. ಮುತಾಲಿಕ್ ಆರ್.ಆರ್.ಹುಕ್ಕೇರಿ, ತಾಲೂಕು ದರ್ಶನ, ಪುಟ ೫

೨೨. ಪಪ್ಪು ಆರ್.ಎಸ್, ಮತ್ತು ದೇವ್ ಎಸ್.ಬಿ, ಪೇಲಿಯೋಲಿಥಿಕ್ ಟೈಮ್ಸ್ ಇನ್ ಕಲಾದಗಿ ಬೆಸಿನ್, ಪುಟ ೬೧

೨೩. ಪಪ್ಪು ಆರ್.ಎಸ್, ಮತ್ತು ದೇವ್ ಎಸ್.ಬಿ, ಪೇಲಿಯೋಲಿಥಿಕ್ ಟೈಮ್ಸ್ ಇನ್ ಕಲಾದಗಿ ಬೆಸಿನ್, ಪುಟ ೬೧

೨೪. ಪಪ್ಪು ಆರ್.ಎಸ್, ಮತ್ತು ದೇವ್ ಎಸ್.ಬಿ, ಪೇಲಿಯೋಲಿಥಿಕ್ ಟೈಮ್ಸ್ ಇನ್ ಕಲಾದಗಿ ಬೆಸಿನ್, ಪುಟ ೬೧

೨೫. ಪಪ್ಪು ಆರ್.ಎಸ್, ಮತ್ತು ದೇವ್ ಎಸ್.ಬಿ, ಪೇಲಿಯೋಲಿಥಿಕ್ ಟೈಮ್ಸ್ ಇನ್ ಕಲಾದಗಿ ಬೆಸಿನ್, ಪುಟ ೨೬

೨೬. ಮುತಾಲಿಕ್ ಆರ್.ಆರ್.ಹುಕ್ಕೇರಿ, ತಾಲೂಕು ದರ್ಶನ, ಪುಟ ೪೩

೨೭. ಕ್ಯಾಂಬೆಲ್, ಬೆಳಗಾವಿ ಗೆಜೆಟಿಯರ್, ಪುಟ ೩೫

೨೮. ಮುತಾಲಿಕ್ ಆರ್.ಆರ್.ಹುಕ್ಕೇರಿ, ತಾಲೂಕು ದರ್ಶನ, ಪುಟ ೭

೨೯. ಗೋಕಾವಿ, ಸಿರಿಸಂಪದ, ಪುಟ ೧೫

೩೦. ಕರ್ನಾಟಕ ಚರಿತ್ರೆ, ಸಂ ೧, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ ೯೬

೩೧. ಜೇಮ್ಸ್ ಕ್ಯಾಂಬೆಲ್, ಬೆಳಗಾಮ್ ಗೆಜೆಟಿಯರ್, ಪುಟ ೩೫

೩೨. ಐ.ಎ.ಆರ್, ೧೯೭೬-೭೭, ಪುಟ ೨೪

೩೩. ಕ್ಷೇತ್ರಕಾರ್ಯದಲ್ಲಿ ಸಿಕ್ಕ ಉಪಕರಣ

೩೪. ಐಎಆರ್, ೧೯೭೬-೭೭, ಪುಟ ೨೪

೩೫. ಐಎಆರ್, ೧೯೭೬-೭೭, ಪುಟ ೨೪

೩೬. ಮ್ಯಾನ್ ಲ್ಯಾಂಡ್ ರಿಲೇಶನ್, ಡ್ಯುರಿಂಗ್ ಪ್ಲೆಸ್ಟೋಸೀನ್ ಪಿರಿಯಡ್, ಇನ್ ಕಲಾದಗಿ ಬೇಸೀನ್, ಅಧ್ಯಾಯ ೪, ಪುಟ ೨೬-೩೦

೩೭. ಕ್ಷೇತ್ರಕಾರ್ಯದಲ್ಲಿ ಸಂದರ್ಭದಲ್ಲಿ ದೊರೆತ ಉಪಕರಣ

೩೮. ಕ್ಷೇತ್ರಕಾರ್ಯದಲ್ಲಿ ಕಂಡುಬಂದ ಹಾಗೆ

೩೯. ಕ್ಷೇತ್ರಕಾರ್ಯದಲ್ಲಿ ಕಂಡುಬಂದ ಹಾಗೆ

೪೦. ಪಪ್ಪು ಮತ್ತು ದೇವ್ ಎಸ್.ಬಿ, ಮ್ಯಾನ್ ಲ್ಯಾಂಡ್ ರಿಲೇಶನ್ ಡ್ಯುರಿಂಗ್ ಪ್ರಸ್ಟೋಸೀನ್ ಪಿರಿಯಡ್, ಇನ್ ಕಲಾದಗಿ ಬೇಸೀನ್, ಅಧ್ಯಾಯ ೪, ಪುಟ ೩೫-೩೬

೪೧. ಕ್ಯಾಂಬೆಲ್, ಬೆಳಗಾಂ ಗೆಜೆಟಿಯರ್, ಪುಟ ೩೫-೩೬

೪೨. ಕ್ಷೇತ್ರಕಾರ್ಯದಲ್ಲಿ ಸಿಕ್ಕ ಉಪಕರಣ

೪೩. ಕರ್ನಾಟಕ ಚರಿತ್ರೆ, ಸಂ ೧, ಪುಟ ೧೫೦-೧೭೧

೪೪. ಐಎಆರ್, ೧೯೬೩-೬೪, ಪುಟ ೨೩

೪೫. ಐಎಆರ್, ೧೯೬೩-೬೪, ಪುಟ ೨೩

೪೬. ಐಎ, ಸಂ ೩, ೧೮೭೪, ಪುಟ ೩೦೬-೩೦೮

೪೭. ಐಎಆರ್, ೧೯೬೫-೬೬ ಪುಟ ೩೨

೪೮. ಕೆ.ಬಿ.ಶಿವತಾರಕ್, ಕರ್ನಾಟಕದ ಪುರಾತತ್ವ ನೆಲೆಗಳು, ಪುಟ ೫೦೭-೨೭

# ಅಧ್ಯಾಯ ಮೂರು

## ಚರಿತ್ರೆ

ಸಾಂಸ್ಕೃತಿಕ ಇತಿಹಾಸ ಕ್ಷೇತ್ರಕ್ಕೆ ಈ ಪ್ರದೇಶವು ತನ್ನದೇ ಆದ ಕೊಡುಗೆಯನ್ನು ನೀಡಿದೆ. ಬಹುವಿಸ್ತಾರವಾದ ಬೆಳಗಾವಿ ಜಿಲ್ಲಾ ಪ್ರದೇಶದಲ್ಲಿ ಶಾತವಾಹನ, ಆದಿಕದಂಬ, ಬಾದಾಮಿಯ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ಹೊಯ್ಸಳ, ಸೇವುಣ ಅರಸು ಮನೆತನಗಳು ದೀರ್ಘಕಾಲ ರಾಜ್ಯಭಾರ ಮಾಡುತ್ತಿದ್ದವು. ರಾಷ್ಟ್ರಕೂಟರ ಸಾಮಂತರಾದ ಸವದತ್ತಿಯ ರಟ್ಟರು, ಕಲ್ಯಾಣದ ಚಾಲುಕ್ಯರ ಸಾಮಂತ ಅರಸರಾದ ಗೋವೆಯ ಕದಂಬರು, ಕೊಲ್ಹಾಪುರದ ಶಿಲಾಹಾರರು, ಅಲ್ಲದೇ ೧೪ನೆಯ ಶತಮಾನದ ನಂತರಾವಧಿಯಲ್ಲಿ ಆಳಿದ ವಿಜಯನಗರದ ಅರಸರು, ಬಿಜಾಪುರದ ಆದಿಲ್‌ಷಾಹಿಗಳು ಹಾಗೂ ಅವಕಾಶ ಸಿಕ್ಕಾಗೊಮ್ಮೆ ಈ ಪ್ರದೇಶವನ್ನು ವಶಪಡಿಸಿಕೊಳ್ಳುತ್ತಿದ್ದ ಮರಾಠ ರಾಜ್ಯದ ಅಧಿಕಾರಿಗಳು, ತಮ್ಮ ಆಡಳಿತವನ್ನು ಬೆಳಗಾವಿ ಜಿಲ್ಲೆಯ ಪ್ರದೇಶದಲ್ಲಿ ನಿರ್ವಹಿಸಿರುವ ಬಗೆಗೆ ದಾಖಲೆಗಳಿವೆ. ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವ ಕೊಣ್ಣೂರು ಪರಿಸರವೂ ಮೇಲೆ ಉಲ್ಲೇಖಿಸಿದ ಎಲ್ಲಾ ರಾಜಮನೆತನಗಳ ಆಳ್ವಿಕೆಗೆ ಒಳಪಟ್ಟಿತ್ತು. ಇಲ್ಲಿ ಸಿಕ್ಕಿರುವ ಶಾಸನಗಳು ಆ ಕಾಲದ ರಾಜಕೀಯ ಆಡಳಿತದ ಬಗೆಗೆ ವಿವರವಾದ ಮಾಹಿತಿ ನೀಡುತ್ತವೆ. ಆದರೂ ಬೇರೆ ಬೇರೆ ಪ್ರದೇಶದಲ್ಲಿ ಸಿಕ್ಕಿರುವ ಮಾಹಿತಿಗಳನ್ನು ಪರಿಶೀಲಿಸಿ ಅಭಿಪ್ರಾಯ ಪಡುವುದಾದರೆ ಈ ಪರಿಸರದ ಸಮಗ್ರ ರಾಜಕೀಯ ಚರಿತ್ರೆ ಕಟ್ಟಿಕೊಳ್ಳುವಲ್ಲಿ ಶಾಸನಗಳ ಅನುಪಸ್ಥಿತಿ ಹೆಚ್ಚಾಗಿ ಕಂಡುಬರುವುದು. ಅಲ್ಲದೆ ಸಿಕ್ಕಿರುವ ಶಾಸನಗಳು ಹೆಚ್ಚಿನ ಅಸ್ಪಷ್ಟತೆ ಹಾಗೂ ತ್ರುಟಿತವಾಗಿವೆ. ಕದಂಬ, ಬಾದಾಮಿ ಚಾಲುಕ್ಯ, ಕಲ್ಯಾಣದ ಚಾಲುಕ್ಯ, ಕಲಚೂರಿ, ಸವದತ್ತಿಯ ರಟ್ಟರು ಹಾಗೂ ಸೇವುಣರ ಶಾಸನಗಳು ಲಭ್ಯವಿದ್ದು, ಅವು ಆ ಕಾಲದ ರಾಜಕೀಯ ಸಂಬಂಧಗಳನ್ನು ವಿವರಿಸಿ ಚರಿತ್ರೆಯನ್ನು ಕಟ್ಟಿಕೊಡುವಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ಕೊಣ್ಣೂರು ಪರಿಸರವು ಜಿಲ್ಲೆಯ ಎರಡು ದೊಡ್ಡ ತಾಲೂಕುಗಳಾದ ಗೋಕಾಕ್ ಮತ್ತು ಹುಕ್ಕೇರಿ ತಾಲೂಕಿನ ಕೆಲವು ಭಾಗಗಳನ್ನು ಒಳಗೊಂಡಿದೆ. ಪ್ರಾಚೀನ ಕೊಣ್ಣೂರು (ಕೊಂಡನೂರು) ವಿಭಾಗ, ಇಂದಿನ

ಗೋಕಾಕ್ ತಾಲೂಕಿನ ಪಶ್ಚಿಮ ಭಾಗದಲ್ಲಿ ಕೇಂದ್ರೀಕರಣಗೊಂಡಿದೆ. ಕೊಣ್ಣೂರು ಪಟ್ಟಣವನ್ನು ಪ್ರಾಚೀನ ಶಾಸನಗಳಲ್ಲಿ ಕೊಂಡನೂರು[೧] ಎಂದು ಉಲ್ಲೇಖಿಸಲಾಗಿದೆ. ಜಿಲ್ಲೆಯನ್ನು ಕೊಣ್ಣೂರು ಎಂಬ ಹೆಸರಿನ ಎರಡು ಊರುಗಳಿವೆ. ಒಂದು ಗೋಕಾಕ್ ಮತ್ತೊಂದು ಚಿಕ್ಕೋಡಿ[೨] ತಾಲೂಕಿನಲ್ಲಿದೆ.

ಪ್ರಾಚೀನ ಕೊಂಡನೂರು ಕೂಹಂಡಿ ವಿಭಾಗದ ಕುಂದರಗಿ ಕಂಪಣದ ಮುಖ್ಯ ಚಿಕ್ಕ ಆಡಳಿತ ವಿಭಾಗವಾಗಿತ್ತು.[೩] ಕೂಹಂಡಿ - ೩೦೦೦ ರ ಉಲ್ಲೇಖ ಭಾಗಶಃ ಆ ವಿಭಾಗದಲ್ಲಿ ಇದ್ದ ಗ್ರಾಮಗಳ ಸೂಚಕವಾಗಿತ್ತು.[೪] ರಟ್ಟರ ಆಡಳಿತದಲ್ಲಿ ವಿಭಾಗವಾಗಿದ್ದ ಕೂಹಂಡಿ - ೩೦೦೦ ವು ಬನವಾಸಿ - ೧೨೦೦೦ ಎಂಬ ಬಹುದೊಡ್ಡ ಆಡಳಿತ ವಿಭಾಗದಲ್ಲಿ ಒಳಗೊಂಡಿತ್ತು. ಕೂಹಂಡಿ ವಿಭಾಗವು ಸಹಾ ಬಹಳ ವಿಸ್ತಾರವಾದ ಆಡಳಿತ ವಿಭಾಗವಾಗಿತ್ತು.[೫]

ಈ ಆಡಳಿತ ಘಟಕವು ಉತ್ತರದಲ್ಲಿ ಕೃಷ್ಣಾನದಿ, ದಕ್ಷಿಣಕ್ಕೆ ಮಲಪ್ರಭಾ ನದಿ, ಪೂರ್ವಕ್ಕೆ ತೊರಗಲೆ ನಾಡು ಮತ್ತು ಬೆಳುವಲ - ೩೦೦[೬] ಹಾಗೂ ಪಶ್ಚಿಮದಲ್ಲಿ ಕೊಲ್ಹಾಪುರದ ಶಿಲಾಹಾರರು ಅಂದರೆ ಗಡಹಿಂಗ್ಲಜ ಮತ್ತು ಚಂದಗಡ ಪ್ರದೇಶದವರೆಗೂ ವಿಸ್ತರಿಸಿತ್ತು.[೭] ಇಂದಿನ ಬೆಳಗಾವಿ ಜಿಲ್ಲೆಯ ಹೆಚ್ಚಿನ ಭಾಗ, ಬಾಗಲಕೋಟೆ ಜಿಲ್ಲೆಯ ಮುಧೋಳ ಹಾಗೂ ಜಮಖಂಡಿ ತಾಲೂಕುಗಳೂ ಇದರ ವ್ಯಾಪ್ತಿಯಲ್ಲಿದ್ದವು.[೮] ಇಂಥ ಬಹುಮುಖ್ಯ ಆಡಳಿತ ವಿಭಾಗವಾಗಿದ್ದ ಕೂಹಂಡಿ ೩೦೦೦ ರಲ್ಲಿ ಕುಂದರಗಿ (ಕೊಣ್ಣೂರು ಪರಿಸರ) ಕಂಪಣ ಅತಿ ಮುಖ್ಯ ಪ್ರದೇಶವಾಗಿ ಅಸ್ತಿತ್ವದಲ್ಲಿತ್ತು. ಕೊಣ್ಣೂರು ಪರಿಸರದಲ್ಲಿ ಅತೀ ಹೆಚ್ಚು ಪ್ರಭಾವ ಬೀರಿದ ರಾಜಕೀಯ ಮನೆತನವೆಂದರೆ ಸವದತ್ತಿಯ ರಟ್ಟರು.

ಕೂಹಂಡಿ ೩೦೦೦ ನಾಡಿನಲ್ಲಿದ್ದ ಪ್ರಮುಖ ಆಡಳಿತ ಘಟಕಗಳು ಈ ಕೆಳಗಿನಂತಿವೆ.

**ತೊರಗಲೆನಾಡು :**

ಇದು ಇಂದಿನ ರಾಮದುರ್ಗ ತಾಲೂಕಿನ ಪ್ರದೇಶ. ಇಲ್ಲಿರುವ ಹೊಳೆತೊರಗಲ್ಲು ತೊರಗಲೆ ನಾಡಿನ ರಾಜಧಾನಿಯಾಗಿತ್ತು.

**ಬೆಳುವಲ - ೩೦೦ :**

ಇದು ಬೆಳಗಾವಿ ಜಿಲ್ಲೆಯ ಸವದತ್ತಿ, ಧಾರವಾಡ ಜಿಲ್ಲೆಯ ನರಗುಂದ, ನವಲಗುಂದ, ಗದಗ ತಾಲೂಕು ದಕ್ಷಿಣ ತಾಲೂಕಿನ ಕೆಲ ಪ್ರದೇಶ, ಬಾದಾಮಿ, ಹುನಗುಂದ ಭಾಗಗಳನ್ನು ಒಳಗೊಂಡಿತ್ತು. ರಟ್ಟರ ಕಾಲದಲ್ಲಿದ್ದ ಆಡಳಿತ ಘಟಕಗಳು ಈ ಕೆಳಗಿನಂತಿವೆ.

೧. ತೇರಿದಾಳ - ೧೨

೨. ಕರುಂಬೆಟ್ಟ ಕಂಪಣ

೩. ಸೊಗಲ - ೩೦

೪. ಸುಗಂಧವರ್ತಿ - ೧೨

೫. ಹೊರಗಟ್ಟಿ - ಸಪ್ತತಿ

೬. ಹುಬ್ಬಳ್ಳಿ - ೧೨ (ಮುಗುಟಖಾನ್)

೭. ವೇಳುಗ್ರಾಮ - ೩೦ (ಈಗಿನ ಬೆಳಗಾವಿ)

೮. ಉತ್ಸುಗ್ರಾಮ (ಉಚ್ಚಗಾಂವ) - ೩೦

೯. ಕೊರವಲ್ಲಿ ಕಂಪಣ

೧೦. ನೂಲೆನಾಡು (ನೂಲಿ, ಹುಕ್ಕೇರಿ ತಾಲೂಕು)

೧೧. ಕುಂದರಗಿ ಕಂಪಣ

೧೨. ನೇಸರ್ಗಿ - ೬

೧೩. ಪೂವಿನಬಾಗೆ (ರಾಯಬಾಗ)

೧೪. ಕೂಂಡಿ ಪಟ್ಟಣ[೧೦]

ಪ್ರಸ್ತುತ ಅಧ್ಯಯನಕ್ಕೆ ಆಯ್ದುಕೊಂಡಿರುವ ಕೊಣ್ಣೂರು ಪರಿಸರವು ಕುಂದರಗಿ ಕಂಪಣ, ಕುರಂಬೆಟ್ಟ ಕಂಪಣ, ಕೂಂಡಿ ಪಟ್ಟಣ ಎಂಬ ಕಂಪಣಗಳನ್ನು ಹೊಂದಿತ್ತು. ಮಧ್ಯ ಕಾಲದ ರಾಜಕೀಯ ಸನ್ನಿವೇಶಗಳಲ್ಲಿ ಅಂಕಲೆ ಪರಗಣ, ಹಾಗೂ ಪಾಶ್ಚಾಪೂರ ಪರಗಣಗಳು ಅಸ್ತಿತ್ವಕ್ಕೆ ಬಂದವು. ಅವುಗಳು ಸಹ ಕೊಣ್ಣೂರು ಪರಿಸರದಲ್ಲಿ ಪ್ರಮುಖ ಭಾಗಗಳಾಗಿವೆ. ಈ ಪ್ರದೇಶದ ರಾಜಕೀಯ ಸನ್ನಿವೇಶಗಳನ್ನು ಕಟ್ಟಿಕೊಳ್ಳಲು ಬಹುಮುಖ್ಯವಾಗಿ ಶಾಸನಗಳನ್ನು ಆಧರಿಸಲಾಗಿದೆ. ಪುರಾತತ್ತ್ವ ಅಂಶಗಳಿಗೆ ಹೆಚ್ಚಿನ ಮಹತ್ವ ನೀಡಿರುವ ಹಿನ್ನೆಲೆಯಲ್ಲಿ ರಾಜಕೀಯ ಚರಿತ್ರೆಯನ್ನು ಅಧ್ಯಯನಕ್ಕೆ ಪೂರಕವಾಗಿ ಮಾತ್ರ ಬಳಸಿಕೊಳ್ಳಲಾಗಿದೆ. ಇದೇ ಅಧ್ಯಾಯದಲ್ಲಿ ರಾಜಕೀಯ ಪರಿಸ್ಥಿತಿಗಳನ್ನಲ್ಲದೆ, ಆ ಕಾಲದ ಆಡಳಿತ ಸಮಾಜೋ-ಧಾರ್ಮಿಕ, ಆರ್ಥಿಕ ಮುಂತಾದ ಮಹತ್ವದ ವಿಚಾರಗಳನ್ನು ಸಂಕ್ಷಿಪ್ತವಾಗಿ ವಿವೇಚಿಸುವ ಪ್ರಯತ್ನ ಮಾಡಲಾಗಿದೆ.

ಮೇಲೆ ಉಲ್ಲೇಖಿತ ರಾಜಮನೆತನಗಳ ರಾಜಕೀಯ ಚರಿತ್ರೆಯನ್ನು ಅರಿಯಲು ಕೆಲವು ಐತಿಹ್ಯಗಳು ಹಾಗೂ ಲಭ್ಯವಾಗಿರುವ ಶಾಸನಗಳು ಸಹಾಯಕವಾಗಿವೆ. ಉದಾಹರಣೆಗೆ, ಕೊಣ್ಣೂರು ಪರಿಸರವು ಮೌರ್ಯರು ಆಳ್ವಿಕೆಗೆ ಒಳಪಟ್ಟಿರುವ ಮಾಹಿತಿಯನ್ನು ತಿಳಿಯಲು ಈ ಪರಿಸರದಲ್ಲಿರುವ ಐತಿಹ್ಯಗಳೇ ಪ್ರಮುಖ ಆಧಾರಗಳಾಗಿವೆ. ನಂತರದ ಕಾಲದಲ್ಲಿ ಆಡಳಿತ ನಿರ್ವಹಿಸಿರುವ ಕದಂಬ, ಬಾದಾಮಿ ಚಾಲುಕ್ಯ, ರಾಷ್ಟ್ರಕೂಟ, ಕಲ್ಯಾಣದ ಚಾಲುಕ್ಯ, ಕಲಚೂರಿ, ಸೇವುಣ ಹಾಗೂ ರಟ್ಟರ ಕಾಲದ ಸಂದರ್ಭಗಳನ್ನು ತಿಳಿಯಲು ಇಲ್ಲಿರುವ ಶಾಸನಗಳೇ ಪ್ರಮುಖ ಪಾತ್ರವಹಿಸುತ್ತವೆ. ಜಿಲ್ಲೆಯ ಎಲ್ಲಾ ಪ್ರದೇಶಗಳಲ್ಲಿ ಶಾಸನಗಳು ಸಿಕ್ಕಿದ್ದರೂ ಹೆಚ್ಚಿನವು ತ್ರುಟಿತವಾಗಿವೆ ಹಾಗೂ ಅಸ್ಪಷ್ಟವಾಗಿವೆ. ಕೂಹಂಡಿ ನಾಡು ಎಂಬ

ಪ್ರಾಚೀನ ಆಡಳಿತ ವಿಭಾಗದಲ್ಲಿ ಬರುವ ಇಂದಿನ ಗೋಕಾಕ್, ಕೊಣ್ಣೂರು, ಮಮದಾಪುರ, ಕಲ್ಲೊಳ್ಳಿ, ರಾಯಬಾಗ, ನೇಸರ್ಗಿ, ಸೌಂದತ್ತಿ ಹಾಗೂ ಹಲಸಿ ಮುಂತಾದ ಸ್ಥಳಗಳಲ್ಲಿ ಸಿಗುವ ಶಾಸನಗಳು ಈ ಪ್ರದೇಶದ ಚರಿತ್ರೆಯನ್ನು ಕಟ್ಟಿಕೊಡುವಲ್ಲಿ ಸಹಾಯಕವಾಗಿವೆ.[೧೧] ಕೊಣ್ಣೂರು ಪರಿಸರಕ್ಕೆ ಸಂಬಂಧಿಸಿದವನ್ನು ಬಳಸಿಕೊಂಡು ವಿವರಿಸಲಾಗಿದೆ. ಅಧ್ಯಯನಕ್ಕೆ ಆಯ್ದುಕೊಂಡಿರುವ ಕೊಣ್ಣೂರು ಪರಿಸರದ ರಾಜಕೀಯ ಸ್ಥಿತಿಗತಿಗಳನ್ನು ತಿಳಿದುಕೊಳ್ಳಲು ಸಂಕ್ಷಿಪ್ತವಾಗಿ ಎರಡು ಭಾಗಗಳಾಗಿ ಮಾಡಲಾಗಿದೆ.

೧. ಮೌರ್ಯರಿಂದ - ರಾಷ್ಟ್ರಕೂಟರವರೆಗೆ

೨. ಕಲ್ಯಾಣದ ಚಾಲುಕ್ಯರಿಂದ - ವಿಜಯನಗರದವರೆಗೆ

## ೧. ಮೌರ್ಯರಿಂದ ರಾಷ್ಟ್ರಕೂಟ :

### ಮೌರ್ಯರು :

ಕರ್ನಾಟಕದಲ್ಲಿ ಮೌರ್ಯರು ಆಳಿದರೆಂಬುದಕ್ಕೆ ಸಾಕಷ್ಟು ಪುರಾವೆಗಳಿವೆ. ಬನವಾಸಿಯವರೆಗೆ ಅವರ ರಾಜಕೀಯ ಪ್ರಭಾವವಿತ್ತು. ಕರ್ನಾಟಕದ ಪ್ರಮುಖವಾದ ಪ್ರಾಚೀನ ನೆಲೆಗಳಲ್ಲಿ ಮೌರ್ಯರ ಕಾಲದ ಶಾಸನಗಳು ಕಂಡುಬಂದಿದ್ದು, ಆ ಪರಿಸರದ ವಿವರಗಳನ್ನು ಮಾತ್ರ ತಿಳಿಯಲು ಸಾಧ್ಯವಾಗಿದೆ. ಆದರೆ ಆ ಕಾಲದ ಆಡಳಿತದ ಕುರುಹುಗಳ ಬಗೆಗೆ ತಿಳಿಸುವ ಮೌರ್ಯರ ಶಾಸನಗಳು ಈ ಪರಿಸರದಲ್ಲಿ ಲಭ್ಯವಿಲ್ಲ. ಹೀಗಾಗಿ ಐತಿಹ್ಯಗಳಿಂದಲೇ ·ನಾವು ಹೆಚ್ಚಿನ ಮಾಹಿತಿ ಪಡೆಯಬಹುದಾಗಿದೆ. ಕೆಲವು ಐತಿಹ್ಯಗಳಿಂದ ಮೌರ್ಯರ ಕಾಲದಲ್ಲಿ ಈ ಪರಿಸರದಲ್ಲಿ ಜೈನಧರ್ಮದ ಪ್ರಚಾರವಿತ್ತೆಂದು ತಿಳಿಯುತ್ತದೆ.[೧೨] ಆ ಕಾಲದ ಆಡಳಿತ ನಿರ್ವಹಣೆಯ ಬಗೆಗೆ ಅರಿತುಕೊಳ್ಳಲು ಐತಿಹ್ಯಗಳೇ ನಮಗೆ ಪ್ರಮುಖವಾಗಿ ಕಂಡುಬರುತ್ತವೆ. ಮೌಖಿಕ ಆಧಾರಗಳ ಮೂಲಕ ಕೊಣ್ಣೂರು ಪರಿಸರದಲ್ಲಿ ಆಡಳಿತ ನಡೆಸಿದರೆಂಬುದಕ್ಕೆ ಮಾಹಿತಿಗಳಿವೆ. ಕರ್ನಾಟಕದಲ್ಲಿ ಮೌರ್ಯರ ಪ್ರವೇಶ ಚಂದ್ರಗುಪ್ತ ಅರಸನಿಂದ ಪ್ರಾರಂಭವಾಗುತ್ತದೆ. ಶ್ರವಣಬೆಳಗೊಳದ ಮಾರ್ಗ ಮಧ್ಯದಲ್ಲಿ ಕೊಣ್ಣೂರು ಗ್ರಾಮಕ್ಕೂ ಚಂದ್ರಗುಪ್ತ ದೊರೆ ಹಾಗೂ ಆತನ ಜೊತೆ ಆಗಮಿಸಿದ್ದ ಜೈನಮುನಿಗಳು ಭೆಟ್ಟಿ ನೀಡಿದ್ದರೆಂಬ ಪ್ರತೀತಿ ಇದೆ.[೧೩] ಇಲ್ಲಿ ವಿಶ್ರಾಂತಿಗೆಂದು ತಂಗಿದ್ದ ಜೈನಮುನಿಗಳು ತಮ್ಮ ವ್ರತಾಚರಣೆಯನ್ನು ಮಾಡಿದ್ದರು. ಅದಕ್ಕಾಗಿ ಈ ಗ್ರಾಮದ ದಕ್ಷಿಣ ಭಾಗದಲ್ಲಿರುವ ಪ್ರದೇಶವನ್ನು ಸ್ಥಳೀಯರು ತಪಸ್ಸೀಮರಡಿ[೧೪] ಎಂದು ಕರೆಯುತ್ತಾರೆ. ಹಾಗೂ ಇದೇ ಪರಿಸರದಲ್ಲಿ ಇರುವ ಬೃಹತ್ ಶಿಲಾಗೋರಿಗಳ ಸಮೂಹಗಳನ್ನು ಜೈನ ಗುಂಫಾ (ಗುಹೆ) ಎಂದು ಕರೆಯುವ ವಾಡಿಕೆ ಇದೆ. ಉತ್ತರ ಭಾರತದಿಂದ ತೀರಾ ದಕ್ಷಿಣ ಭಾರತಕ್ಕೆ ಪ್ರವೇಶದ ಹೆಬ್ಬಾಗಿಲು ಆಗಿ ಕಂಡುಬರುವ ಬೆಳಗಾವಿ ಜಿಲ್ಲೆಯ ಪ್ರದೇಶದಿಂದಲೇ ಬಹುಶಃ ಮೌರ್ಯ ಚಂದ್ರಗುಪ್ತ ಬಂದಿರುವ ಸೂಚನೆಗಳನ್ನು ಈ ಐತಿಹ್ಯಗಳು ನೀಡುತ್ತವೆ. ಇದೆ ಪ್ರದೇಶದಲ್ಲಿರುವ ಕೊಣ್ಣೂರು ಪರಿಸರದಲ್ಲಿಯೂ ನೆಲೆಸಿ ಹೋಗಿರುವ ಸಾಧ್ಯತೆಗಳಿವೆ. ಅಂತಹ ಮಹತ್ವದ ಐತಿಹಾಸಿಕ ಸಂಗತಿಯನ್ನು ಸ್ಥಳೀಯರು ತಮ್ಮ ಮೌಖಿಕ ಕಥನಗಳ ಮೂಲಕ ಈವರೆಗೂ ಉಳಿಸಿಕೊಂಡು ಬಂದಿರುವುದು ಸಹಜವಾಗಿದೆ.

ಇನ್ನೊಂದು ಬಹಳ ಮುಖ್ಯ ವಿಷಯ ಇಲ್ಲಿರುವ ಬೃಹತ್ ಶಿಲಾಗೋರಿಗಳನ್ನು ಸ್ಥಳೀಯರು ಜೈನಮುನಿಗಳು ತಪಸ್ಸು ಕೈಗೊಂಡ ಗುಂಫಾ (ಗುಹೆ)ಗಳೆಂದು ಕರೆಯುತ್ತಾರೆ. ಕ್ರಿ.ಪೂ. ನಾಲ್ಕನೆಯ ಶತಮಾನದ ಪೂರ್ವದಲ್ಲಿಯೇ ನಿರ್ಮಾಣವಾಗಿದ್ದ ಬೃಹತ್ ಶಿಲಾಗೋರಿಯ ಸಂಸ್ಕೃತಿಗಳ ಕುರುಹುಗಳಿಗೆ ಸಂಬಂಧ ಕಲ್ಪಿಸಿ ಆ ಕಾಲದ ಜೈನಧರ್ಮ ಹಾಗೂ ಮೌರ್ಯರ ಉಪಸ್ಥಿತಿಯನ್ನು ಸೂಕ್ಷ್ಮವಾಗಿ ತಿಳಿಸಿಕೊಡುವ ಈ ಐತಿಹ್ಯಗಳು ತುಂಬಾ ಪ್ರಮುಖವಾದವು. ಕ್ರಿ.ಶ. ೧೦ ರಿಂದ ೧೩ನೆಯ ಶತಮಾನದಲ್ಲಿ ಕೊಣ್ಣೂರು ಪರಿಸರದಲ್ಲಿ ಜೈನಧರ್ಮವು ತುಂಬಾ ಮುಖ್ಯ ಧರ್ಮವಾಗಿ ತನ್ನ ಪಾತ್ರ ವಹಿಸುತ್ತದೆ. ಅದಕ್ಕೆ ಸಂಬಂಧಿಸಿದ ಅನೇಕ ಲಿಖಿತ ದಾಖಲೆಗಳು ಕಂಡುಬಂದಿವೆ.[೧೫]

ಬೃಹತ್‌ಶಿಲಾಯುಗದ ಸಂಸ್ಕೃತಿಯ ನೆಲೆಗಳಿಗೂ ಹಾಗೂ ಆ ಕಾಲದ ಜೈನಮುನಿಗಳಿಗೂ ಇರುವ ಸಂಬಂಧಗಳು. ಜೈನಮುನಿಗಳು ತಮ್ಮ ಕಾರ್ಯಗಳಿಂದ ಪಾರಮಾರ್ಥ ಸಾಧಿಸಲು ಬಹುಶಃ ಪ್ರಾಚೀನ ಬೃಹತ್‌ಶಿಲಾ ಸಂಸ್ಕೃತಿಯ ನೆಲೆಗಳನ್ನು ಆಯ್ದುಕೊಂಡಿರಬಹುದು. ಕಾರಣ ಇಂತಹ ನೆಲೆಗಳನ್ನು ಗ್ರಾಮದಿಂದ ದೂರದ ಚಿಕ್ಕ ಗುಡ್ಡ-ಬೆಟ್ಟಗಳಲ್ಲಿ ಕಾಣುತ್ತೇವೆ. ಅಂತಹ ಏಕಾಂತ ಪ್ರದೇಶಗಳು ಮುನಿಗಳಿಗೆ ಆಕರ್ಷಣೆ ಆಗಿರಬಹುದು. ತಮ್ಮ ಸಾಧನೆಗಳನ್ನು ಸಿದ್ಧಿಸುವ ಸಮಯದಲ್ಲಿ ಮರಣವನ್ನು ಹೊಂದಿರಬಹುದು. ಅಂತಹ ಪರಿನಿರ್ವಾಣವಾದ ಮುನಿಗಳನ್ನು ಅಲ್ಲಿಯೇ ಹೂಳಿರುವ ಸಾಧ್ಯತೆಗಳು ಇದ್ದಿರಬಹುದು. ಹೀಗಾಗಿ ಜೈನಮುನಿಗಳ ಪ್ರವೇಶಕ್ಕಿಂತ ಮೊದಲು ಅಸ್ತಿತ್ವದಲ್ಲಿದ್ದ ಬೃಹತ್‌ಶಿಲಾಗೋರಿ ಸಮುಚ್ಚಯಗಳು ಮರೆವು ಆಗಿ ಕ್ರಮೇಣ ಮುನಿಗಳ ವಾಸ್ತವ್ಯದ ಸಂಗತಿಗಳು ಮುಂಚೂಣಿಗೆ ಬಂದವು. ಈ ವಿಷಯವನ್ನು ವಿವರಿಸುವ ಕಾರಣವೆಂದರೆ ಬೃಹತ್‌ಶಿಲಾ ಸಂಸ್ಕೃತಿಯ ಹೆಚ್ಚಿನ ನೆಲೆಗಳನ್ನು ಜೈನ ಗುಂಫಾ (ಗುಹೆ)ಗಳೆಂದು ಸ್ಥಳೀಯರು ಕರೆಯುತ್ತಾರೆ. ಈ ಐತಿಹ್ಯಗಳು ಸಾವಿರಾರು ವರ್ಷಗಳಿಂದಲೂ ಉಳಿದುಕೊಂಡು ಬಂದಿವೆ. ಉದಾಹರಣೆಗೆ, ಇಂತಹ ಮಾಹಿತಿಗಳಿರುವ ನೆಲೆಗಳು ತೇರದಾಳ, ಆಸಂಗಿ, ಹಳಂಗಳಿ ಮತ್ತು ಹನಗಂಡಿ (ಜಮಖಂಡಿ ತಾಲೂಕು) ರಾಯಬಾಗ ತಾಲೂಕಿನ ಕುಡಚಿ ಮುಂತಾದವುಗಳನ್ನು ಗಮನಿಸಬಹುದಾಗಿದೆ. ತೇರಿದಾಳ ಎಂಬ ಆಡಳಿತ ವಿಭಾಗವು ಕೂಹಂಡಿ ೩೦೦೦ ನಾಡಿನ ಅಧೀನದಲ್ಲಿತ್ತು.[೧೬]

ಮೌರ್ಯರ ನಂತರ ಶಾತವಾಹನರು ಆಳ್ವಿಕೆ ಮಾಡಿದರು. ದಕ್ಷಿಣ ಭಾರತದಲ್ಲಿ ವಿಶೇಷವಾಗಿ, ಕರ್ನಾಟಕದ ಉತ್ತರ ಭಾಗಗಳಲ್ಲಿ ರಾಜಕೀಯ ಐಕ್ಯತೆಯನ್ನು ಮೂಡಿಸಲು ಪ್ರಯತ್ನಿಸಿದರು. ಬೆಳಗಾವಿ ಸಮೀಪದ ವಡಗಾಂವ-ಮಾಧವಪುರ ನೆಲೆಯಲ್ಲಿ ಶಾತವಾಹನರ ಕಾಲದ ಕುರುಹುಗಳು ಕಂಡುಬಂದಿವೆ. ಅವುಗಳಲ್ಲಿ ಸಣ್ಣ ಇಟ್ಟಿಗೆಗಳು, ಮಡಿಕೆ ಹಾಗೂ ಗೊಂಬೆ ಆಕಾರದ ಅವಶೇಷಗಳು ಕಂಡುಬಂದಿವೆ.[೧೭] ಕೊಣ್ಣೂರು ಪರಿಸರದಲ್ಲಿ ಶಾತವಾಹನರ ಆಳ್ವಿಕೆಗೆ ಸಂಬಂಧಿಸಿದ ನಿರ್ದಿಷ್ಟವಾದ ಯಾವುದೇ ದಾಖಲೆಗಳಿಲ್ಲ. ಆದರೆ ಈ ಪರಿಸರಕ್ಕೆ ಹೊಂದಿಕೊಂಡಿರುವ ವಡಗಾಂ-ಮಾದವಪುರ ತೀರ ಸಮೀಪದ ನೆಲೆಗಳಾಗಿದೆ. ಹೀಗಾಗಿ ಇಲ್ಲಿಯೂ ಅವರು ಆಡಳಿತ ನಿರ್ವಹಿಸಿರುವ ಸಾಧ್ಯತೆಗಳಿವೆ.

**ಕದಂಬರು :**

ಕರ್ನಾಟಕದ ಪ್ರಾಚೀನ ಅರಸು ಮನೆತನ ಎಂಬ ಹೆಗ್ಗಳಿಕೆ ಕದಂಬರಿಗೆ ಸಲ್ಲುತ್ತದೆ. ಅವರು ಬನವಾಸಿಯನ್ನು (ವೈಜಯಂತಿ) ಕೇಂದ್ರ ರಾಜಧಾನಿಯನ್ನಾಗಿ ಮಾಡಿಕೊಂಡು ಅಧಿಕಾರ ನಿರ್ವಹಿಸಿದರು. ಆಡಳಿತದ ಅನುಕೂಲಕ್ಕಾಗಿ ಇನ್ನು ಕೆಲವು ಪ್ರದೇಶಗಳನ್ನು ಉಪರಾಜಧಾನಿಗಳನ್ನಾಗಿ ಮಾಡಿಕೊಂಡಿದ್ದರು. ಅವುಗಳಲ್ಲಿ ಬೆಳಗಾವಿ ಜಿಲ್ಲೆಯ ಖಾನಾಪುರ ತಾಲೂಕಿನ ಹಲಸಿ (ಪಲಾಸಿಕ) ಸಹ ಮಹತ್ವದ ಪಟ್ಟಣವಾಗಿತ್ತು. ಈ ಮನೆತನಕ್ಕೆ ಸಂಬಂಧಿಸಿದಂತೆ ಬೆಳಗಾವಿ ಜಿಲ್ಲೆಯಲ್ಲಿ ಹಲವಾರು ಶಾಸನಗಳು ಲಭ್ಯವಾಗಿವೆ. ಅವುಗಳಲ್ಲಿ ಕಾಕುತ್ಸವರ್ಮ, ಮೃಗೇಶವರ್ಮ, ದಾಮೋದರ, ರವಿವರ್ಮ ಮತ್ತು ಹರಿವರ್ಮನ ಕಾಲದ ಶಾಸನಗಳು ಪ್ರಮುಖವಾಗಿವೆ. ಮುಂದೆ ಬಾದಾಮಿ ಚಾಲುಕ್ಯರ ಕಾಲದಲ್ಲಿಯೂ ಕದಂಬರು ಆಳುತ್ತಿದ್ದರೆಂಬುದಕ್ಕೆ ಹಲವು ಪುರಾವೆಗಳಿವೆ.[೧೮] ಮೊದಲನೆ ಪುಲಕೇಶಿಯ ಮಗ ಮೊದಲನೆಯ ಕೀರ್ತಿವರ್ಮ ಕದಂಬರನ್ನು ಸೋಲಿಸಿದನೆಂದು ಶಾಸನಗಳು ತಿಳಿಸುತ್ತವೆ. ಇಮ್ಮಡಿ ಕುಮಾರವರ್ಮನ ಮಗ ಮಾಂಧಾತರಾಜ, ದಾಮೋದರ, ಮಧುವರ್ಮ ಎಂಬು ಕದಂಬ ದೊರೆಗಳ ಹೆಸರುಗಳು ಕಂಡುಬರುತ್ತವೆ.[೧೯]

ಕೊಣ್ಣೂರು ಪರಿಸರದಲ್ಲಿ ಕದಂಬರ ಕಾಲದ ಒಂದು ಶಾಸನಗಳು ಲಭ್ಯವಾಗಿದೆ. ಕೊಣ್ಣೂರು ಗ್ರಾಮದ ಬಂಡೆಗಲ್ಲಿನಲ್ಲಿ ಈ ಶಾಸನ[೨೦] ಕೆತ್ತಲಾಗಿದೆ ಎಂದು ಉಲ್ಲೇಖಿಸಲಾಗಿದೆ. ಆದರೆ ಈ ಶಾಸನ ಗೋಕಾಕ್ ಜಲಪಾತ ಪರಿಸರದಲ್ಲಿ ಇರುವ ಬಗೆಗೆ ಮಾಹಿತಿಗಳು ಕ್ಷೇತ್ರಕಾರ್ಯಾವಧಿಯಲ್ಲಿ ಲಭ್ಯವಾಗಿವೆ. ಕೊಣ್ಣೂರು ಸಮೀಪದ ಜಲಪಾತದ ಬಲದಂಡೆಯ ಬಂಡೆಯ ಮೇಲೆ ಈ ಶಾಸನವನ್ನು ಕೊರೆಯಲಾಗಿದೆ. ಇದನ್ನು ಚೌಕಾದ ಶಿರೋಪಟ್ಟಿಯಲ್ಲಿ (Box headed) ಕೆತ್ತಲಾಗಿದೆ. ಉತ್ತರದ ವಾಕಾಟಕ ಮತ್ತು ಗುಪ್ತರ ಕಾಲದ ಶಾಸನಗಳಂತೆ ಇದೆ. ಬಹುಶಃ ಕದಂಬರಿಗೂ ಹಾಗೂ ಗುಪ್ತ - ವಾಕಾಟಕರಿಗೂ ಇದ್ದ ರಕ್ತಸಂಬಂಧಗಳೇ ಇದಕ್ಕೆ ಕಾರಣವಿರಬಹುದು.[೨೧] ಕಾಕುತ್ಸವರ್ಮನ ಮಗಳು ಗುಪ್ತರ ಕುಮಾರಗುಪ್ತನ ಮಗ ಸ್ಕಂದಗುಪ್ತನನ್ನು ಹಾಗೂ ವಾಕಾಟಕರ ದೊರೆ ನರೇಂದ್ರ ಸೇನ ಕುಂತಲೇಶ್ವರನ (ಕಾಕುತ್ಸವರ್ಮ) ಮಗಳಾದ ಅಜ್ಜಿತ ಭಟ್ಟಾರಿಕೆಯನ್ನು ವಿವಾಹವಾಗಿದ್ದ.[೨೨] ಈ ಶಾಸನ ೬ನೆಯ ಶತಮಾನದ ಕಾಲದ್ದಾಗಿದ್ದು. ಅದರಲ್ಲಿ ದಾಮೋದರ ಎಂಬ ನೃಪನ ಹೆಸರಿದೆ.[೨೩] ಆದರೆ ಶಾಸನವು ಅತ್ಯಂತ ತೃಟಿತವಾಗಿದೆ ಹಾಗೂ ಅಸ್ಪಷ್ಟವಾಗಿವೆ. ಉಲ್ಲೇಖಿತ ನೃಪನ ಬಗೆಗೆ ಸಹ ಇತಿಹಾಸದಲ್ಲಿ ಹೆಚ್ಚಿನ ಮಾಹಿತಿ ಇಲ್ಲ. ಈತನು ಬಾದಾಮಿಯ ಚಾಲುಕ್ಯ ದೊರೆಗಳ ಸಾಮಂತನಾಗಿರುವ ಸಾಧ್ಯತೆಗಳನ್ನು ಸಹ ಕೆಲವರು ವ್ಯಕ್ತಪಡಿಸಿದ್ದಾರೆ. ಆದರೆ ಈ ದೊರೆಯ ಉಲ್ಲೇಖಗಳು ಬೇರೆ ಯಾವುದೇ ಶಾಸನಗಳಲ್ಲಿ ದೊರೆಯುವುದಿಲ್ಲ. ಒಟ್ಟಾರೆ ಕದಂಬರ ಆಳ್ವಿಕೆಯ ಕುರುಹುಗಳು ಮೊಟ್ಟಮೊದಲಿಗೆ ಈ ಶಾಸನದಲ್ಲಿ ಉಲ್ಲೇಖವಾಗಿರುವುದು ಮಹತ್ವದ ಸಂಗತಿ.

**ಬಾದಾಮಿಯ ಚಾಲುಕ್ಯರು :**

ಕರ್ನಾಟಕದ ಇತರ ಪ್ರದೇಶದ ಹಾಗೆ ಬೆಳಗಾವಿ ಜಿಲ್ಲೆಯಲ್ಲಿಯೂ ಬಾದಾಮಿ ಚಾಲುಕ್ಯರು ಆಳಿದರೆನ್ನಲು ಹಲವಾರು ದಾಖಲೆಗಳಿವೆ. ಜಿಲ್ಲೆಯ ಹುಕ್ಕೇರಿ, ಗೋಕಾಕ್ ಮತ್ತು ಗೊಡಚಿಯಲ್ಲಿನ (ರಾಮದುರ್ಗ ತಾಲೂಕು) ಶಾಸನಗಳು, ಸವದತ್ತಿ ತಾಲೂಕಿನ ಯಕ್ಕೇರಿ ಹಾಗೂ ಹೂಲಿಯ ಶಾಸನಗಳು ಅವರ ಆಳ್ವಿಕೆಯನ್ನು ಪುಷ್ಟೀಕರಿಸುತ್ತವೆ.[೨೪] ಹೂಲಿಯ ಶಾಸನವು ಬಾದಾಮಿಯ ಚಾಲುಕ್ಯರನ್ನು ಕುರಿತ ಮಹತ್ವದ ಮಾಹಿತಿಗಳನ್ನು ನೀಡುತ್ತದೆ. ಇದರಲ್ಲಿ ಬರುವ ಮಂಗಳರಾಜನ ವಿವರಣೆಯು ಬಾದಾಮಿ ಚಾಲುಕ್ಯರ ಮಂಗಳೇಶನದಾಗಿದೆ. ಅಲ್ಲದೆ ಒಂದನೆಯ ಪುಲಿಕೇಶಿ, ಆತನ ಮಕ್ಕಳಾದ ಒಂದನೆಯ ಕೀರ್ತಿವರ್ಮ ಮತ್ತು ಮಂಗಳೇಶನ ಕುರಿತು ವಿವರಣೆಗಳಿವೆ. ಆದರೆ ಕೊಣ್ಣೂರು ಪರಿಸರದಲ್ಲಿ ಇವರ ಕಾಲಕ್ಕೆ ಸಂಬಂಧಿಸಿದಂತೆ ನೇರವಾಗಿರುವ ಶಾಸನೋಕ್ತ ಉಲ್ಲೇಖಗಳಿಲ್ಲ. ಗೋಕಾಕ್ ತಾಲೂಕಿನ ಮಾಲದಿನ್ನಿ ಶಾಸನದಲ್ಲಿರುವ ಲಿಪಿಯ[೨೫] ಅಕ್ಷರಗಳು ಬಾದಾಮಿ ಚಾಲುಕ್ಯ ಕಾಲದ ಸಾಮ್ಯತೆಯನ್ನು ಪಡೆದಿರುವ ಬಗೆಗೆ ಊಹಿಸಲಾಗಿದೆ. ಗೋಕಾಕ್‌ನ ತಾಮ್ರಪಟ ಶಾಸನ[೨೬] ಬಾದಾಮಿಯ ಚಾಲುಕ್ಯರ ಕಾಲದ್ದೆಂದು ವಿದ್ವಾಂಸರಾದ ಕೆ.ವಿ.ರಮೇಶ್‌ರವರು ಅಭಿಪ್ರಾಯಪಟ್ಟಿದ್ದಾರೆ.[೨೭] ಆದರೆ ಶಾಸನ ಕುರಿತಂತೆ ವಿವರ ಅಭಿಪ್ರಾಯವನ್ನು ಪ್ರಕಟಿಸಿಲ್ಲ. ಹೀಗಾಗಿ ಕೆಲವು ಅಸ್ಪಷ್ಟ ಮಾಹಿತಿಗಳನ್ನಿಟ್ಟುಕೊಂಡೇ ಆ ಕಾಲದ ಚರಿತ್ರೆಯನ್ನು ಕಟ್ಟಿಕೊಳ್ಳಬೇಕಾಗಿರುವ ಅವಶ್ಯಕತೆ ಇದೆ.

**ರಾಷ್ಟ್ರಕೂಟರು :**

ಬೆಳಗಾವಿ ಜಿಲ್ಲೆಯ ನೇಸರ್ಗಿ, ಗೋಕಾಕ್, ಸೌಂದತ್ತಿ, ಆಸೂಟಿ ಮುಂತಾದ ಕಡೆ ರಾಷ್ಟ್ರಕೂಟರ ಕಾಲದ ಅನೇಕ ಶಾನಗಳು ಸಿಕ್ಕಿದ್ದು, ಅವು ಚರಿತ್ರೆಯನ್ನು ಕಟ್ಟಿಕೊಳ್ಳಲು ಸಹಾಯಕವಾಗಿವೆ. ಮುಮ್ಮಡಿ ಗೋವಿಂದ, ಇಮ್ಮಡಿ ಕೃಷ್ಣ, ಮುಮ್ಮಡಿ ಕೃಷ್ಣ, ಅಮೋಘವರ್ಷ ಹಾಗೂ ಇನ್ನಿತರ ಅರಸರ ಉಲ್ಲೇಖಗಳು ಇಲ್ಲಿರುವ ಶಾಸನಗಳಲ್ಲಿ ವ್ಯಕ್ತವಾಗಿವೆ.[೨೮] ಕೊಣ್ಣೂರು ಪರಿಸರದಲ್ಲಿ ರಾಷ್ಟ್ರಕೂಟ ಕಾಲದ ಶಾಸನಗಳು ದೊರಕಿವೆ. ಅದರಲ್ಲಿ ಗೋಕಾಕ್‌ನಲ್ಲಿ ದೊರೆತ ಮೂರು ತಾಮ್ರಪಟ ಶಾಸನ.[೨೯] ರಾಷ್ಟ್ರಕೂಟರ ಆಡಳಿತಕ್ಕೆ ಸಂಬಂಧಿಸಿವೆ. ಸದ್ಯ ಧಾರವಾಡದ ಇತಿಹಾಸ ಸಂಶೋಧನಾ ಸಂಸ್ಥೆಯಲ್ಲಿರುವ ಈ ಶಾಸನ ಇಡೀ ದಕ್ಷಿಣ ಭಾರತದಲ್ಲಿಯೇ ಅವರಿಗೆ ಸಂಬಂಧಿಸಿದ ಅತ್ಯಂತ ಪ್ರಾಚೀನ ಶಾಸನವಿದು.[೩೦] ಈ ಪರಿಸರದಲ್ಲಿ ಸಿಗುವ ಸ್ಪಷ್ಟ ಹೆಚ್ಚು ವಿವರಗಳನ್ನು ನೀಡುವ ಶಾಸನಗಳು ರಾಷ್ಟ್ರಕೂಟರ ಕಾಲದವು ಎಂಬುದು ಮಹತ್ವವಾದುದು. ಕ್ರಿ.ಶ. ೬ನೆಯ ಶತಮಾನಕ್ಕೆ ಸೇರಿದ ಉಲ್ಲೇಖವಿದೆ. ಈ ಶಾಸನದಲ್ಲಿ "ದೇಜ್ಜಮಹಾರಾಜ" ಎಂಬ ದೊರೆಯ ಉಲ್ಲೇಖಗಳಿವೆ. ಆತನು ರಾಷ್ಟ್ರಕೂಟರ ಮನೆತನಕ್ಕೆ ಸೇರಿದವನಾಗಿದ್ದು ಅವನ ಮಕ್ಕಳು ಮಾಡಿದ ಭೂದಾನದ ವಿಷಯವನ್ನು ಪ್ರಸ್ತಾಪಿಸಲಾಗಿದೆ. ದೇಜ್ಜಮಹಾರಾಜನ ಮಗ ಇಂದ್ರರಾಜನು ತನ್ನ ಹಾಗೂ ತನ್ನ ಪೂರ್ವಿಕರ ಪುಣ್ಯಕ್ಕಾಗಿ ಭೂದಾನ ಮಾಡಿದ ಎಂದು ತಿಳಿದುಬರುತ್ತದೆ. ಇದೇ ಉದ್ದೇಶದಿಂದ ೫೦ ನಿವರ್ತನದಷ್ಟು ಭೂಮಿಯನ್ನು ಜಲಾರ್ ಗ್ರಾಮದಲ್ಲಿ ಮತ್ತು ಪೂರ್ವಿನ

ಗ್ರಾಮದಲ್ಲಿ ನೀಡಲಾಗಿತ್ತು. ಇದು ಕಷ್ಮಾಂಡಿ ಆಡಳಿತದ ಘಟಕದ ಸಮೀಪದಲ್ಲಿತ್ತೆಂದು ತಿಳಿಸುತ್ತದೆ. ಈ ಕಷ್ಮಾಂಡಿಯೇ ಕೂಹಂಡಿ ಎಂಬುದು ಎಂ.ಬಿ.ನೇಗಿನಾಳರ ಅಭಿಪ್ರಾಯ. ದಾನವನ್ನು ಜಂಬೂಖಂಡ ಗಣದ ಆರ್ಯನಂದ್ಯಾಚಾರ್ಯರಿಗೆ ನೀಡಲಾಯಿತು. ಆದರೆ ಈ ದೇಜ್ಜಮಹಾರಾಜರ ರಾಷ್ಟ್ರಕೂಟದ ವಂಶದವನಾದರೂ, ಆತನು ಮಳಖೇಡದ ಮೂಲದವನೆಂಬುದಕ್ಕೆ ಸಾಕ್ಷಾಧಾರಗಳಿಲ್ಲ.[೩೧] ಈತ ಸ್ವತಂತ್ರ ದೊರೆಯೆಂಬುದೂ ಸಹ ಅಸ್ಪಷ್ಟ. ಈತನು ಬಾದಾಮಿ ಚಾಲುಕ್ಯರ ಆಡಳಿತಕ್ಕೆ ಸಂಬಂಧಿಸಿದ ಅಧಿಕಾರಿಯೇ ಎಂಬ ಚರ್ಚೆಯನ್ನು ಕೆ.ವಿ.ರಮೇಶ್‌ರವರು ಇಟ್ಟಿದ್ದಾರೆ. ಅಲ್ಲದೆ ಬಾದಾಮಿ ಚಾಲುಕ್ಯರು ಅಧಿಕಾರವನ್ನು ಹತೋಟಿಯಲ್ಲಿಟ್ಟುಕೊಳ್ಳುವ ವೇಳೆಯಲ್ಲಿ ಈತನು ಆಳುತ್ತಿದ್ದನೆಂಬುದು ಕೂಡ ಅಸ್ಪಷ್ಟವಾಗಿದೆ. ಶಾಸನದಲ್ಲಿ ಈತನಿಗೆ 'ಮಹಾರಾಜ' ಎಂಬ ಬಿರುದು ಇರುವುದರಿಂದ ಬಹುಶಃ ಆತ ಯಾರ ಅಧೀನಕ್ಕೊಳಪಡದೇ ಸ್ವತಂತ್ರನಾಗಿರಬಹುದೆಂದು ಊಹಿಸಬಹುದಾಗಿದೆ. ರಾಷ್ಟ್ರಕೂಟರ ಸಾಮಂತರಾದ ಸೇಂದ್ರಕರ ಉಲ್ಲೇಖಗಳೂ ಇದರಲ್ಲಿವೆ.[೩೨] ಪ್ರಾರಂಭದ ಶಾಸನವೊಂದು ಮಾತ್ರ ಕಂಡುಬಂದಿದ್ದು ನಂತರ ಅವಧಿಯ ಯಾವುದು ಶಾಸನಗಳು ಈ ಪರಿಸರದಲ್ಲಿ ಕಂಡಬರದಿರುವುದು ಸೋಜಿಗದ ಸಂಗತಿ. ದಾಖಲೆಗಳ ಅನುಪಸ್ಥಿತಿಯಲ್ಲಿ ಇಲ್ಲಿನ ದೇವಾಲಯಗಳ ಲಕ್ಷಣಗಳು ರಾಷ್ಟ್ರಕೂಟರು ಈ ಪ್ರದೇಶದಲ್ಲಿ ಆಳಿದರೆಂಬುದು ತಿಳಿಯಲು ಸಹಾಯಕವಾಗಿವೆ.

## ೨. ಕಲ್ಯಾಣದ ಚಾಲುಕ್ಯರಿಂದ ವಿಜಯನಗರದವರೆಗೆ :

### ಕಲ್ಯಾಣದ ಚಾಲುಕ್ಯರು :

ಬಾದಾಮಿ ಚಾಲುಕ್ಯರ ವಂಶದವರೆಂದು ಕರೆದುಕೊಳ್ಳುವ ಕಲ್ಯಾಣದ ಚಾಲುಕ್ಯರು[೩೩] ರಾಷ್ಟ್ರಕೂಟರನ್ನು ಪದಚ್ಯುತಿಗೊಳಿಸಿ ಅಧಿಕಾರವನ್ನು ಪಡೆದರು. ಕ್ರಿ.ಶ. ೯೭೩ರಲ್ಲಿ ಇಮ್ಮಡಿ ತೈಲನು ಪಟ್ಟಕ್ಕೆ ಬಂದನು. ಸು. ೨೦೦ ವರ್ಷಗಳ ಕಾಲ ಕರ್ನಾಟಕದ ಪ್ರದೇಶವನ್ನು ಆಳಿದ ಈ ಮನೆತನ ಸಾಂಸ್ಕೃತಿಕ ಕ್ಷೇತ್ರಕ್ಕೆ ವಿಶೇಷ ಕೊಡುಗೆ ನೀಡಿದೆ. ಇವರಿಗೆ ಸಂಬಂಧಿಸಿದ ಶಾಸನಗಳು ಜಿಲ್ಲೆಯಲ್ಲಿ ಬೆಳಗಾವಿ ಜಿಲ್ಲೆಯಲ್ಲಿ ಲಭ್ಯವಾಗಿವೆ. ವಿಶೇಷವಾಗಿ ಆರನೆಯ ವಿಕ್ರಮಾದಿತ್ಯ, ಎರಡನೆಯ ಜಯಸಿಂಹ, ಒಂದನೆಯ ಸೋಮೇಶ್ವರನ ಕಾಲಕ್ಕೆ ಸಂಬಂಧಿಸಿದ್ದವುಗಳಾಗಿವೆ. ಕಲ್ಯಾಣದ ಚಾಲುಕ್ಯರ ಅಧೀನ ಅಧಿಕಾರಿಗಳಾಗಿ ಸವದತ್ತಿಯ ರಟ್ಟರು ಈ ಪ್ರದೇಶದಲ್ಲಿ ಆಳ್ವಿಕೆ ಮಾಡಿದ್ದಾರೆ.[೩೪] ರಟ್ಟರು ಕೂಹಂಡಿ - ೩೦೦೦ ಆಡಳಿತ ವಿಭಾಗದ ಅಧಿಪತಿಗಳಾಗಿದ್ದರು. ಕೊಣ್ಣೂರು ಪರಿಸರದಲ್ಲಿ ಕಲ್ಯಾಣ ಚಾಲುಕ್ಯ ಅರಸರ ಹಾಗೂ ಕಾಲದ ಸಾಮಂತರ ಹಲವಾರು ಶಾಸನಗಳು ಲಭ್ಯವಾಗಿವೆ. ಈ ಮೂಲಾಧಾರಗಳೆಲ್ಲಾ ಆ ಕಾಲದ ಚರಿತ್ರೆಯನ್ನು ನಿರೂಪಿಸುವ ಜೊತೆಗೆ ಸಮಕಾಲೀನ ಇತರ ವಿಷಯಗಳನ್ನು ಸಹ ಉಲ್ಲೇಖಿಸುತ್ತವೆ.

ಕ್ರಿ.ಶ. ೧೦೩೨ರ ಕೊಣ್ಣೂರು ಶಾಸನದಲ್ಲಿ[೩೫] ಎರಡನೆಯ ಜಯಸಿಂಹನ ಪುತ್ರ ಒಂದನೆಯ ಸೋಮೇಶ್ವರ (ಅಹಮಲ್ಲ) ಈ ಪ್ರದೇಶದಲ್ಲಿ ಯುವರಾಜನಾಗಿ ಆಳುತ್ತಿದ್ದನೆಂದು, ಆತ ಪರಮಾರ

ಭೋಜನ ವಿರುದ್ಧ ಯುದ್ಧ ಮಾಡಿ, ಅವನ ರಾಜಧಾನಿ ಧಾರಾನಗರವನ್ನು ಸುಟ್ಟು ಹಾಕಿದನು. ಅಲ್ಲದೇ ಮಾಂಡವರನ್ನು ಗೆದ್ದನೆಂದು ಶಾಸನಗಳು ವಿವರಿಸುತ್ತದೆ. ಕೊಣ್ಣೂರಿನ ಕಲಿಯಮೇಶ್ವರ ದೇವಾಲಯಕ್ಕೆ ಭೂಮಿ, ಮನೆ, ನಿವೇಶನ, ಎಣ್ಣೆಯ ಗಾಣ ಹಾಗೂ ಆರು ಗದ್ಯಾಣ ಹಣವನ್ನು ದಾನ ನೀಡಿದ ಮಾಹಿತಿಯೂ ಇದೆ. ಇಲ್ಲಿಯ ಕ್ರಿ.ಶ. ೧೦೮೭ರ ಶಾಸನವು[೬೬] ಆರನೆಯ ವಿಕ್ರಮಾದಿತ್ಯನ ಆಳ್ವಿಕೆಯನ್ನು ಕುರಿತು ತಿಳಿಸುತ್ತದೆ. ಇದರಲ್ಲಿ ಸ್ಥಳೀಯ ಜಿನಾಲಯಕ್ಕೆ ಎರಡು ಮತ್ತರೂ ಭೂಮಿ, ಎಣ್ಣೆಯ ಗಾಣ ಮತ್ತು ಹೂದೋಟವನ್ನು ದಾನ ಮಾಡಿದ ಮಾಹಿತಿಗಳಿವೆ. ವಿಕ್ರಮಾದಿತ್ಯನ ಮಗನಾದ ಜಯಕರ್ಣನ ಉಲ್ಲೇಖವೂ ಇದರಲ್ಲಿದೆ. ಕೂಹಂಡಿ - ೩೦೦೦ ಆಡಳಿತ ವಿಭಾಗವನ್ನು ಸೌಂದತ್ತಿಯ ರಟ್ಟರ ಎರಡನೆಯ ಸೇನ ಅಥವಾ ಕಾಲಸೇನನು ಆಳುತ್ತಿದ್ದನು. ಈತನು ವಿಕ್ರಮಾದಿತ್ಯನ ಮಗನಾದ ಜಯಕರ್ಣನ ದಂಡನಾಯಕ ಚಾಮುಂಡನ ಕೈಕೆಳಗೆ ಕಾರ್ಯ ನಿರ್ವಹಿಸುತ್ತಿದ್ದನೆಂದು ತಿಳಿದುಬರುತ್ತದೆ.[೬೭]

ಕಲ್ಯಾಣ ಚಾಲುಕ್ಯರ ದೊರೆ ಇಮ್ಮಡಿ ಜಯಸಿಂಹನ ಸಾಮಂತನಾಗಿದ್ದ ಹಾಗೂ ರಟ್ಟಮಾರ್ತಾಂಡ ಬಿರುದುಳ್ಳ ಎರಗನ ಉಲ್ಲೇಖ ರಾಯಬಾಗ ಶಾಸನದಲ್ಲಿ ಬರುತ್ತದೆ.[೬೮] ಇದರಲ್ಲಿ ಮಹಾಪ್ರಧಾನ ದಂಡನಾಯಕನಾದ ಮಾದಿರಾಜನಿಗೆ ಕುರುಂಬೆಟ್ಟ ಕಂಪಣದ ಬಳಿಯ ಬಾಡಕಂಕನೂರು (ರಾಯಬಾಗ ತಾಲೂಕಿನ ಕಂಕಣವಾಡಿ) ಪ್ರಭುತ್ವವನ್ನು ವಹಿಸಿಕೊಟ್ಟ ಮಾಹಿತಿಯಿದೆ. ಕೊಣ್ಣೂರಿನ ಶಾಸನದಲ್ಲಿ[೬೯] ಆರನೆಯ ವಿಕ್ರಮಾದಿತ್ಯನ ಉಲ್ಲೇಖವಿದ್ದು ಅದರಲ್ಲಿ ವಿಕ್ರಮಾದಿತ್ಯನ ನೆಚ್ಚಿನ ಮಗ ಜಯಕರ್ಣ ನಿರ್ಮಿಸಿದ ಜೈನ ದೇವಾಲಯದ ಮುನಿಗಳಾದ ವಾಸುಪೂಜ್ಯರಿಗೆ ದಾನ ನೀಡಿದ ಮಾಹಿತಿಗಳಿವೆ. ಕುಂದರಿಗಿಯ ಶಾಸನದಲ್ಲಿ[೭೦] ಆರನೆಯ ವಿಕ್ರಮಾದಿತ್ಯ ಹಾಗೂ ಆತನ ಪ್ರಸಿದ್ಧ ಮಹಾಪ್ರಚಂಡ ದಂಡನಾಯಕ, ಮಹೇಶ್ವರಯ್ಯರಸ ಸೇನಾಧಿಪತಿಯ ಉಲ್ಲೇಖಗಳಿವೆ. ಇದೇ ಶಾಸನದಲ್ಲಿ ಮಹಾಸಾಮಂತನಾದ ಪೆರ್ಮಾಡಿಯರಸನ ಉಲ್ಲೇಖಗಳು ಇವೆ. ಈತ ಆರನೆಯ ವಿಕ್ರಮಾದಿತ್ಯನ ಪ್ರೀತಿಯ ರಾಣಿ ಚಂದಲಾದೇವಿಯ ಮಗಳಾದ ನಾಗಲಾದೇವಿಯನ್ನು ವಿವಾಹವಾಗಿದ್ದ.[೭೧] ಕಲ್ಯಾಣ ಚಾಲುಕ್ಯರ ಜಯಸಿಂಹನ ಸಹೋದರಿ ಅಕ್ಕಾದೇವಿಯು ಕಿಸುಕಾಡು - ೭೦ ವಿಭಾಗದಲ್ಲಿ ನಡೆಸುತ್ತಿದ್ದ ಬಗ್ಗೆ ಬಾಗಲಕೋಟೆ ಜಿಲ್ಲೆಯ ಹುನಗುಂದ ತಾಲೂಕಿನ ಅರಸೀಬೀಡಿ ಶಾಸನದಲ್ಲಿ[೭೨] ಉಲ್ಲೇಖಗಳಿವೆ. ಈಕೆ ಕಿಸುಕಾಡು ಎಪ್ಪತ್ತು ಆಡಳಿತ ವಿಭಾಗದ ರಾಜಧಾನಿ ಕೇಂದ್ರವಾಗಿತ್ತು. ಶಾಸನಗಳಲ್ಲಿ ಇದನ್ನು ವಿಕ್ರಮಪುರ (ಅರಸೀಬೀದಿ) ಎಂದು ಕರೆಯಲಾಗಿದೆ. ಕಿಸುಕಾಡು - ೭೦ ಆಡಳಿತ ವಿಭಾಗವು ಬಾದಾಮಿಯ ತಾಲೂಕಿನ ದಕ್ಷಿಣ ಭಾಗ ಹಾಗೂ ರೋಣ ತಾಲೂಕಿನ ಉತ್ತರ ಭಾಗವನ್ನು ವ್ಯಾಪಿಸಿತ್ತು.[೭೩] ಪಟ್ಟದಕಲ್ಲು ಅದರ ರಾಜಧಾನಿಯಗಿತ್ತೆಂದು ಡಾ.ಫ್ಲೀಟರ ಅಭಿಪ್ರಾಯಿಸಿದ್ದಾರೆ. ರಾಣಿ ಅಕ್ಕಾದೇವಿಯು ಗೋಕಾಕ ನಗರಕ್ಕೆ ಮುತ್ತಿಗೆ ಹಾಕಿದ ವಿಷಯವು ಅರಸೀಬೀದಿ ಶಾಸನದಿಂದ ತಿಳಿದುಬರುತ್ತದೆ. ಇದೇ ಸಂದರ್ಭದಲ್ಲಿ ವಿಕ್ರಮಪುರದ ಗುಣದ ಬೆಡಂಗಿ ಜಿನಾಲಯಕ್ಕೆ ದಾನ ನೀಡಿದ ಉಲ್ಲೇಖಗಳು ಇವೆ. ಈಕೆಗೆ ರಣಭೈರವಿ ಎಂಬ ಬಿರುದಿತ್ತು. ಮುತ್ತಿಗೆಯ ಸಂದರ್ಭದಲ್ಲಿ ಗೋಕಾಗೆಯಲ್ಲಿದ್ದ ಗೋವೆಯ ಕದಂಬರ ಸಾಮಂತನನ್ನು ಸೋಲಿಸಿದ್ದಾಗಿ ಶಾಸನದಿಂದ ತಿಳಿದುಬರುತ್ತದೆ.[೭೪]

ಜಯಸಿಂಹನ ನಂತರ ಬಂದ ಒಂದನೆಯ ಸೋಮೇಶ್ವರನ ಕಾಲದಲ್ಲಿ ಕೂಡ ಈಕೆಯು ಆಡಳಿತವನ್ನು ಮುಂದುವರೆಸಿದಳು. ಈಕೆಯ ಪತಿ ಹಾನಗಲ್ಲಿನ ಕದಂಬರ ದೊರೆ ಮಯೂರವರ್ಮ. ಆತನು ಹಾನಗಲ್ಲು ಹಾಗೂ ಬಂಕಾಪುರಗಳನ್ನು ಕೇಂದ್ರವನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದ್ದಾನೆ.

ಕೂಹಂಡಿ - ೩೦೦೦ ನಾಡಿನ ಪ್ರಮುಖ ಆಡಳಿತ ಘಟಕವಾಗಿದ್ದ ಪೂವಿನಬಾಗೆ (ರಾಯಬಾಗ) ಶಾಸನದಲ್ಲಿಯೂ[೪೬] ಆರನೆಯ ವಿಕ್ರಮಾದಿತ್ಯನ ಉಲ್ಲೇಖಗಳಿವೆ. ಈತನು ಮಾಳವದೇಶದ ದೊರೆಯನ್ನು ಹಾಗೂ ಕೊಲ್ಲಾಪುರದ ಶಿಲಾಹಾರವನ್ನು ಸೋಲಿಸಿರುವ ಬಗೆಗೆ ಮತ್ತು ರಾಣಿ ಪದ್ಮಲದೇವಿಯ ಉಲ್ಲೇಖಗಳೂ ಇವೆ.[೪೭]

ಸಿಕ್ಕಿರುವ ಕೆಲವು ದಾಖಲೆಗಳಿಂದ ಕೊಣ್ಣೂರು ಪರಿಸರದಲ್ಲಿ ಕ.ಚಾಲುಕ್ಯರು ತಮ್ಮ ರಾಜಕೀಯ ಪ್ರಭಾವವನ್ನು ವಿಸ್ತರಿಸಿರುವ ಬಗೆಗೆ ಮಾಹಿತಿಗಳಿವೆ. ಇಂಥ ದಾಖಲೆಗಳಿಂದಲೇ ಅಂದಿನ ರಾಜಕೀಯ, ಸಮಾಜೋ-ಧಾರ್ಮಿಕ, ಆಡಳಿತ ನಿರ್ವಹಣೆ ಹಾಗೂ ಕಲೆಯ ವಿಸ್ತರಣೆಯ ಬಗೆಗೆ ತಿಳಿದುಕೊಳ್ಳಬಹುದಾಗಿದೆ.

**ಸವದತ್ತಿಯ ರಟ್ಟರು. ಕ್ರಿ.ಶ. ೯೩೦ - ೧೨೩೦ :**

ಸವದತ್ತಿ, ಬೆಳಗಾವಿ ಜಿಲ್ಲೆಯ ತಾಲೂಕುಗಳಲ್ಲಿ ಒಂದು. ಇದಕ್ಕೆ ಪ್ರಾಚೀನ ಕಾಲದಲ್ಲಿ 'ಸುಗಂಧವರ್ತಿ'[೪೮] ಎಂದು ಕರೆಯುತ್ತಿದ್ದರು. ಆಧುನಿಕ ಕಾಲದಲ್ಲಿ ಇದನ್ನು ಪರಸಗಡ ಎಂದು, ಈಗೀಗ ಎಲ್ಲಮ್ಮನ ಸವದತ್ತಿ ಎಂದು ಕರೆಯುವ ವಾಡಿಕೆ ಇದೆ: ಸೌಂದತ್ತಿಯ ಸಂಸ್ಕೃತಿ ರೂಪ "ಸುಗಂಧವರ್ತಿ" ಈ ಪ್ರದೇಶದಲ್ಲಿ ಆಳಿದ ರಟ್ಟರು, ರಾಜಕೀಯ ಕ್ಷೇತ್ರದಲ್ಲಿ ಪ್ರಮುಖ ಪಾತ್ರವನ್ನು ವಹಿಸಿದರು. ಕೂಹಂಡಿ- ೩೦೦೦ ನಾಡಿನ ಅಧಿಪತಿಗಳಾಗಿದ್ದ ಇವರು ಸಾಮಂತರಾಗಿ ಹಾಗೂ ಸ್ವತಂತ್ರರಾಗಿ ಸು. ೩೦೦ ವರ್ಷಗಳ ಕಾಲ ಆಳ್ವಿಕೆ ನಡೆಸಿದರು.[೪೯] ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯ ಹಾಗೂ ಕಲಚೂರಿ ಅರಸರ ಸಾಮಂತರಾಗಿದ್ದರು. ಕಲಚೂರಿಗಳ ಪ್ರಾಬಲ್ಯ ಕ್ಷೀಣಿಸಿದ ಮೇಲೆ ಇವರು ಕೆಲವು ವರ್ಷಗಳ ಕಾಲ ಸ್ವತಂತ್ರರಾಗಿ ಆಳಿದರು. ಕೂಹಂಡಿ - ೩೦೦೦ ನಾಡು ಅಂದು ಕುಂತಲ ದೇಶದ ವಿಭಾಗವಾಗಿತ್ತು. ಈ ನಾಡಿನ ವಿಸ್ತಾರ ಉತ್ತರಕ್ಕೆ ಕೃಷ್ಣಾ, ದಕ್ಷಿಣಕ್ಕೆ ಮಲಪ್ರಭಾ ಮತ್ತು ಸವದತ್ತಿಯ ಭಾಗ, ಪೂರ್ವಕ್ಕೆ ತೊರಗಲೆನಾಡು ಮತ್ತು ಬೆಳುವಲ - ೩೦೦[೫೦] ಆಡಳಿತ ವಿಭಾಗ ಹಾಗೂ ಪಶ್ಚಿಮದಲ್ಲಿ ಮಹಾರಾಷ್ಟ್ರದ ಗಡಹಿಂಗ್ಲಜ ಮತ್ತು ಚಂದಗಡ ಪ್ರದೇಶದವರೆಗೆ ವಿಸ್ತರಿಸಿತ್ತು.[೫೧] ಬೆಳಗಾವಿ ಜಿಲ್ಲೆಯ ಯಕ್ಸಂಬಾ, ಭೋಜ, ನೇಸರ್ಗಿ, ಕೊಣ್ಣೂರು, ಗೋಕಾಕ್, ಸಂಕೇಶ್ವರ, ಖಾನಾಪುರ, ಕಲ್ಹೊಳ್ಳಿ, ಆಸುಂಡಿ, ಸೌಂದತ್ತಿ ಮುಂತಾದ ಕಡೆ ಅವರ ಶಾಸನಗಳು ಲಭ್ಯವಾಗಿವೆ. ಇವು ಆ ಮನೆತನದ ರಾಜಕೀಯ ಮತ್ತು ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಿಕೊಡಲು ಸಹಾಯಕವಾಗಿವೆ.

ಕೊಣ್ಣೂರು ಪರಿಸರದಲ್ಲಿ ರಟ್ಟರ ಕಾಲಕ್ಕೆ ಸಂಬಂಧಿಸಿದ ಹಲವಾರು ಶಾಸನಗಳು ನಮಗೆ ಲಭ್ಯವಾಗಿವೆ. ಗೋಕಾಕ್ ಜಲಪಾತದ ಹತ್ತಿರವಿರುವ ಮಹಾಲಿಂಗೇಶ್ವರ ದೇವಾಲಯದ ಶಾಸನದಲ್ಲಿ[೫೨]

ರಟ್ಟರು ತಮ್ಮನ್ನು ಲತ್ತಲೂರು ಪುರುವಾಧೀಶ್ವರರೆಂದು ಕರೆದುಕೊಂಡಿದ್ದಾರೆ. ಇದೇ ರೀತಿಯ ಉಲ್ಲೇಖಗಳು ಬಾಗಲಕೋಟೆ ಜಿಲ್ಲೆಯ ಜಮಖಂಡಿ ತಾಲೂಕಿನ ತೇರದಾಳ ಶಾಸನದಲ್ಲಿ ಹಾಗೂ ಮುಧೋಳ ತಾಲೂಕಿನ ಮಂಟೂರು ಶಾಸನಗಳಲ್ಲಿಯೂ[೫೪] ಕಂಡುಬರುತ್ತವೆ. ತಮ್ಮ ಸ್ವಸಾಮರ್ಥ್ಯದಿಂದ ಸಾಮಂತರಾಗಿ, ಮಹಾಸಾಮಂತರಾಗಿ, ಮಾಂಡಳಿಕರಾಗಿ, ಮಹಾಮಾಂಡಳಿಕರಾಗಿ ಹಾಗೂ ಕೆಲ ಕಾಲ ಸ್ವತಂತ್ರ ದೊರೆಗಳಾಗಿ ಆಳ್ವಿಕೆ ನಡೆಸಿದರು. ಅನೇಕ ಮಹತ್ವದ ಸಾಂಸ್ಕೃತಿಕ ಕೊಡುಗೆಗಳನ್ನು ನೀಡಿದ ಅವರ ಮನೆತನದ ಮೂಲದ (ವಂಶಾವಳಿ) ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಅವುಗಳಲ್ಲಿ ಎರಡು ಶಾಖೆಗಳಿರುವ ಬಗೆಗೆ ಮಾಹಿತಿಗಳಿವೆ.

೧. ಮೇರದನಿಂದ ಪ್ರಾರಂಭವಾದ ಶಾಖೆ

೨. ನನ್ನನಿಂದ ಪ್ರಾರಂಭವಾದ ಶಾಖೆ

**ಮೇರದನಿಂದ ಪ್ರಾರಂಭವಾದ ಶಾಖೆ :**

ರಟ್ಟರ ಮೊದಲ ಶಾಖೆ ಮೈಲಾಪ ತೀರ್ಥನೆಂಬ ಗುರು ಸ್ಥಾಪಿಸಿದ ಕಾರೇಯ ಗಣ (ಪಂಥ)ದ ಪೃಥ್ವಿರಾಮನು ರಟ್ಟರ ಮೂಲ ಪುರುಷ.[೫೫] ಈತ ಮೂರನೆಯ ಕೃಷ್ಣನ ಕಾಲದಲ್ಲಿ ಮಹಾಸಾಮಂತ ಅಥವಾ ಮಹಾಮಂಡಳೇಶ್ವರನಾಗಿದ್ದ.[೫೬] ಮೇರದನನ್ನು ಕೇವಲ ಪೃಥ್ವಿರಾಮನ ತಂದೆ ಎಂದು ಮಾತ್ರ ಉಲ್ಲೇಖಿಸಲಾಗಿದೆ.[೫೭] ರಟ್ಟರ ಮೊದಲ ಶಾಖೆಯನ್ನು ಈ ಕೆಳಗಿನಂತೆ ವಿವರಿಸಲಾಗಿದೆ.[೫೮]




ಮೇಲೆ ಉಲ್ಲೆಖಿಸಿದ ಶಾಖೆಗೆ ಸಂಬಂಧಿಸದ ಯಾವುದೇ ಶಾಸನಗಳು ಕೊಣ್ಣೂರು ಪರಿಸರದಲ್ಲಿ ಲಭ್ಯವಾಗಿಲ್ಲ.

**೨. ನನ್ನನಿಂದ ಪ್ರಾರಂಭವಾದ ಶಾಖೆ :**

ಈ ಶಾಖೆಯ ಇತಿಹಾಸವನ್ನು ತಿಳಿಯಲು ಕೊಣ್ಣೂರು ಪರಿಸರದಲ್ಲಿನ ಹಲವು ಶಾಸನಗಳು ಸಹಾಯಕವಾಗಿವೆ. ನನ್ನನಿಂದ ಪ್ರಾರಂಭವಾದ ಶಾಖೆಯು ಕ್ರಿ.ಶ. ೯೩೦ ರಿಂದ ಕ್ರಿ.ಶ. ೧೨೩೦ ರವರೆಗೆ ಅಸ್ತಿತ್ವದಲ್ಲಿತ್ತು. ಅಂದರೆ ಸು. ೩೦೦ ವರ್ಷಗಳ ಕಾಲ ಇವರು ಆಳ್ವಿಕೆ ನಡೆಸಿದರು.[೬೦]

ನನ್ನ (ಕ್ರಿ.ಶ. ೯೩೦)

(ಎರಡನೆಯ ತೈಲಪನ ಸಾಮಂತ)



ಒಂದನೆಯ ಕಾರ್ತವೀರ್ಯ (ಕತ್ತಮ)





ದಾಯಿಮ - (ದಾವರಿ)

ಒಂದನೆಯ ಕಣ್ಣಕೈರ





(ಕ್ರಿ.ಶ.೧೦೪೦) ಎರಗ (ರಾಣಿ ಮೈಳಾಲಾದೇವಿ)

(ಚಾಲುಕ್ಯ ಎರಡನೆಯ

ಜಯಸಿಂಹನ ಸಾಮಂತ)

ಅಂಕ (ಕ್ರಿ.ಶ. ೧೦೪೦)

(ಒಂದನೆಯ ಸೋಮೇಶ್ವರನ

ಸಾಮಂತ)



ಒಂದನೆಯ ಸೇನ

(ತ್ರಿಭುವನಮಲ್ಲನ ಸಾಮಂತ)





(ಕ್ರಿ.ಶ. ೧೦೮೮)

ಎರಡನೆಯ ಕಣ್ಣಕೈರ (ಕಣ್ಣ)

(ರಾಣಿ ಲಕ್ಷ್ಮಿದೇವಿ)

ಎರಡನೆಯ ಕಾರ್ತವೀರ್ಯ

(ರಾಣಿ ಭಾಗಲದೇವಿ)

(ಎರಡನೆಯ ಸೋಮೇಶ್ವರನ ಸಾಮಂತ ಕ್ರಿ.ಶ. ೧೦೯೬)



ಎರಡನೆಯ ಸೇನ (ಕಾಲಸೇನ - ಕ್ರಿ.ಶ. ೧೦೯೬)

(ಆರನೆಯ ವಿಕ್ರಮಾದಿತ್ಯನ ಸಾಮಂತ)



ಮೂರನೆಯ ಕಾರ್ತವೀರ್ಯ (ಕ್ರಿ.ಶ. ೧೧೪೩-೬೫)

(ರಾಣಿ ಪದ್ಮಲಾದೇವಿ)

(ಕಳಚೂರಿ ಸೋವಿದೇವನ ಸಾಮಂತ)



ಒಂದನೆಯ ಲಕ್ಷ್ಮಿದೇವ (ಕ್ರಿ.ಶ. ೧೧೭೦)

(ಸ್ವತಂತ್ರ ದೊರೆ - ವೇಣು ಗ್ರಾಮ ರಾಜಧಾನಿ)



ನಾಲ್ಕನೆಯ ಕಾರ್ತವೀರ್ಯ (ಕ್ರಿ.ಶ. ೧೧೯೯)    ಮಲ್ಲಿಕಾರ್ಜುನ (ಕ್ರಿ.ಶ. ೧೨೦೪-೧೨೦೪)

(ರಾಣಿಯರು ಏಚಲಾದೇವಿ ಮತ್ತು ಮಾದೇವಿ)



ಎರಡನೆಯ ಲಕ್ಷ್ಮಿದೇವ (ಕ್ರಿ.ಶ. ೧೨೨೮)

ನನ್ನಿ ದೊರೆಗೆ ನನ್ನಪ್ಪಯ್ಯ ಎಂಬ ಹೆಸರೂ ಇದ್ದು, ಆತನ ಬಗ್ಗೆ ಸಾಕಷ್ಟು ಐತಿಹಾಸಿಕ ಪುರಾವೆಗಳಿಲ್ಲ. ಸೌಂದತ್ತಿಯ ರಟ್ಟರ ಆಡಳಿತದ ಸ್ಥಾಪಕನಾದ ಈತನಿಗೆ "ರಟ್ಟ ವಂಶೋದ್ಭವಃ ಖ್ಯಾತೋನನ್ನ ಭೂಸುನಂದನಃ[೬೦] ಎಂದು ಕರೆಯಲಾಗಿದೆ. ಇವನ ಉತ್ತರಾಧಿಕಾರಿಯಾದವನು ಆತನ ಮಗ ಕತ್ತ ಅಥವಾ ಒಂದನೆಯ ಕಾರ್ತವೀರ್ಯ. ಈತನು ಕಲ್ಯಾಣ ಚಾಲುಕ್ಯರ ದೊರೆ ಎರಡನೆಯ ತೈಲಪನ ಸಾಮಂತನಾಗಿದ್ದನು. ಆಗ ಕೂಹಂಡಿ - ೩೦೦೦ ನಾಡು ಇವನ ಅಧೀನದಲ್ಲಿತ್ತು. ಕೊಣ್ಣೂರು ಪರಿಸರದಲ್ಲಿ ಇವನಿಗೆ ಸಂಬಂಧಿಸಿದ ಶಾಸನಗಳು ಲಭ್ಯವಾಗಿಲ್ಲ. ಈತನ ಕಾಲದಲ್ಲಿ ಸೊಗಲವು ಒಂದು ಪ್ರಮುಖವಾದ ವಿದ್ಯಾಕೇಂದ್ರವಾಗಿತ್ತು.[೬೧] ಆತನ ತರುವಾಯ ಅವನ ಮಗ ದಾಯಿಮ ಅಧಿಕಾರ ಪಡೆದ ಸಮರ್ಥ ರಾಜನಾಗಿದ್ದ. ಈತ ರಟ್ಟ ಸಾಮ್ರಾಜ್ಯವನ್ನು ಮತ್ತಷ್ಟು ವಿಸ್ತರಿಸಿದ. ಇವನಿಗೆ "ರಟ್ಟರ ಮೇರು" ಎಂಬ ಬಿರುದಿತ್ತು. ಅವನ ಕಾಲದ ನಂತರ ಆತನ ಹಿರಿಯ ಮಗ ಒಂದನೆಯ ಕಣ್ಣ (ಕಣ್ಣಕೈರ) ಅಧಿಕಾರ ಪಡೆದನು. ತದನಂತರ ಕಣ್ಣಕೈರನ ಹಿರಿಯಮಗ ಎರಗ ಅಧಿಕಾರ ಗದ್ದುಗೆ ಏರಿದನು. ಈತನು ಕಲ್ಯಾಣದ ಚಾಲುಕ್ಯರ ದೊರೆ ಎರಡನೆಯ ಜಯಸಿಂಹನ ಸಾಮಂತನಾಗಿದ್ದನು. ಈತನಿಗೆ 'ಸಿಂಗನ ಗರುಡ' ಎಂಬ ಬಿರೆದಿತ್ತು.[೬೨] ಅಲ್ಲದೆ ಈತನು ಒಂದನೆಯ ಜಗದೇಕಮಲ್ಲನ ಮಹಾಸಾಮಂತನು ಆಗಿದ್ದನು.[೬೩] ಎರಗನ ತರುವಾಯ ಆತನ ತಮ್ಮ ಅಂಕಪಾಲ ಅಥವಾ ಅಂಕ ಪಟ್ಟಕ್ಕೆ ಬಂದನು. ಈತ ಚಾಲುಕ್ಯರ ಒಂದನೆಯ ಸೋಮೇಶ್ವರನ ಸಾಮಂತನಾಗಿದ್ದನು. ಚೋಳರ ವಿರುದ್ಧ ಹೋರಾಡಿದ ಖ್ಯಾತಿ ಇವನದು. ಅಥಣಿ ತಾಲೂಕಿನಲ್ಲಿ ಈತ ವಿದ್ಯಾಕೇಂದ್ರವೊಂದನ್ನು ನಡೆಸುತ್ತಿದ್ದನೆಂದು ತಿಳಿದುಬರುತ್ತದೆ.[೬೪] ಅಂಕನ ತರುವಾಯ ಎರಗನ ಮಗ ಒಂದನೇ ಸೇನನು ಅಧಿಕಾರಕ್ಕೆ ಬಂದನು. ಈತನು ಕೂಡ ಪರಾಕ್ರಮಿ ಹಾಗೂ ದಕ್ಷ ಆಡಳಿತಗಾರನಾಗಿದ್ದನು. ಇವನಿಗೆ ಕಾಲಸೇನ ಎಂಬ ಹೆಸರೂ ಇದ್ದಿತು. ಕಲ್ಯಾಣದ ಚಾಲುಕ್ಯರ ಪ್ರಸಿದ್ಧ ದೊರೆ ಆರನೆಯ ವಿಕ್ರಮಾದಿತ್ಯನ ಸಾಮಂತನಾಗಿದ್ದನು. ಮೈಳಲಾದೇವಿ ಈತನ ಪಟ್ಟದರಸಿಯಾಗಿದ್ದಳು.

ಸೇನನ ನಂತರ ಎರಡನೇ ಕಣ್ಣ ಅಥವಾ ಕಣ್ಣಕೈರ ಅಧಿಕಾರಕ್ಕೆ ಬಂದನು. ಇವನು ಕೂಡ ಆರನೆಯ ವಿಕ್ರಮಾದಿತ್ಯನ ಮಹಾಸಾಮಂತನಾಗಿದ್ದನು. ಶತ್ರುಗಳಿಗೆ ಸಿಂಹಸ್ವಪ್ನವಾಗಿದ್ದ. ನೃತ್ಯ ಸಂಗೀತದಲ್ಲಿಯೂ ಆಸಕ್ತನಾಗಿದ್ದನು.[೬೫] ಕೊಣ್ಣೂರು ಶಾಸನದಲ್ಲಿ ಕೂಡ ಆತನ ಬಗ್ಗೆ ಉಲ್ಲೇಖಗಳಿವೆ[೬೬] ಕಣ್ಣಕೈರನ ನಂತರ ಅವನ ತಮ್ಮ ಎರಡನೆಯ ಕಾರ್ತವೀರ್ಯ ಪಟ್ಟಕ್ಕೆ ಬಂದನು. ಇವನು ಚಾಲುಕ್ಯರ ದೊರೆ ಎರಡನೆಯ ಸೋಮೇಶ್ವರ ಸಾಮಂತಾಧಿಕಾರಿಯಾಗಿದ್ದ.[೬೭] ಇವನಿಗೆ "ಲತ್ತಮಾಪುರ್ರವಾಧೀಶರಂ ತ್ರಿವಳಿ ತೂರ್ಯ್ಯ ನಿರ್ಘೋಷಣಂ ರಟ್ಟಕುಳಭೂಷಣಂ" ಸಿಂಧೂರ ಲಾಂಛಣಂ ವಿವೇಕ ವಿರಂಚನಂ ಸುವರ್ಣ ಗರುಡ ಧ್ವಜಂ ಕಾರ್ತವೀರ್ಯ ನೃಪ"[೬೮] ಎಂದು ಕರೆಯಲಾಗಿತ್ತು. ಈತನಿಗೆ ಭಾಗಲಾದೇವಿ ಹಾಗೂ ಮೈಳಲಾದೇವಿ ಎಂಬ ರಾಣಿಯರಿದ್ದರು. ಇಮ್ಮಡಿ ಕಾರ್ತವೀರ್ಯನ ನಂತರ ಅವನ ಮಗ ಎರಡನೆಯ ಸೇನ ಅಧಿಕಾರ ಪಡೆದು ಸು. ೩೫ ವರ್ಷಗಳ ಕಾಲ ಆಳ್ವಿಕೆ ನಡೆಸಿದನು. ಈತನು ೬ನೆಯ ವಿಕ್ರಮಾದಿತ್ಯನ ಮಗ ಜಯಕರ್ಣನ ಸೇನಾಧಿಪತಿ ಚಾಮುಂಡನ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿದ್ದ.[೬೯] ಇವನ ನಂತರ ಅಧಿಕಾರಕ್ಕೆ ಬಂದವನೆಂದರೆ, ಮೂರನೆಯ ಕಾರ್ತವೀರ್ಯ. ಇವನಿಗೆ ಕತ್ತ ಅಥವಾ ಕತ್ತಮ ಎಂಬ ಉಪನಾಮಗಳಿದ್ದವು. ಈತ ಬಿಜ್ಜಳನ ಮಗ ಸೋಮದೇವನ ಮಹಾಸಾಮಂತನಾಗಿದ್ದನು. ಅಲ್ಲದೆ ಮಹಾಮಂಡಳೇಶ್ವರ ಹಾಗೂ ಚಕ್ರವರ್ತಿ ಎಂಬ ಬಿರುದೂ ಈತನಿಗಿತ್ತು.[೭೦] ಈತನ ತರುವಾಯ ಅವನ ಮಗ ಒಂದನೆಯ ಲಕ್ಷ್ಮೀದೇವ ಪಟ್ಟಕ್ಕೆ ಬಂದನು. ಈತನು ಕೂಡಾ ಪ್ರಬಲ ದೊರೆಯಾಗಿದ್ದನು.ಇವನ ಕಾಲದಲ್ಲಿಯೇ ವೇಣುಗ್ರಾಮ (ಬೆಳಗಾವಿ) ಸೌದತ್ತಿಯ ರಟ್ಟರ ರಾಜಧಾನಿಯಾಯಿತು. ಈತನ ಆಡಳಿತಾವಧಿಯಲ್ಲಿ ರಾಜ್ಯವು ಹೆಚ್ಚಿನ ಅನುಕೂಲತೆಗಳಿಂದ ಕೂಡಿತ್ತು. ನೇಮಿಚಂದ್ರ ಎಂಬ ಪ್ರಸಿದ್ಧ ಕವಿಯು ಒಂದನೆಯ ಲಕ್ಷ್ಮೀದೇವನ ಸಮಕಾಲೀನನಾಗಿದ್ದ.[೭೧] ಈತನ ನಂತರ ಅವನ ಮಗ ನಾಲ್ಕನೆಯ ಕಾರ್ತವೀರ್ಯ ಅಧಿಕಾರ ಪಡೆದ. ರಟ್ಟರ ವಂಶದಲ್ಲಿಯೇ ಪ್ರಸಿದ್ಧತೆಯನ್ನು ಪಡೆದ ದೊರೆ ಆಗಿದ್ದ. ಇವನ ಕಾಲದಲ್ಲಿಯೇ ಬೆಳಗಾವಿಯಲ್ಲಿ 'ಕಮಲಬಸದಿ'ಯನ್ನು ನಿರ್ಮಿಸಲಾಯಿತು. ಜೊತೆಗೆ ಬಾಲಚಂದ್ರಕವಿ, ಪಾರ್ಶ್ವನಾಥಪಂಡಿತ, ಎರಡನೆಯ ಗುಣವರ್ಮರಂತಹ ಪ್ರಸಿದ್ಧ ಕವಿಗಳು ಇವನ ಅವಧಿಯಲ್ಲಿ ಕಂಡುಬರುತ್ತಾರೆ. ಹಲವಾರು ದಾನದತ್ತಿಗಳನ್ನು ನೀಡಿದ್ದ ಈತ, ಕಲಾಪ್ರೇಮಿಯೂ ಹೌದು.[೭೨] ಇವನ ಕಾಲದಲ್ಲಿಯೇ ನೇಸರ್ಗಿಯ ಸಾಮಂತನಾದ ಹಬ್ಬೆಯನಾಯಕ ಅಧಿಕಾರದಲ್ಲಿದ್ದು, ಯುದ್ಧಗಳಲ್ಲಿ ಭಾಗವಹಿಸುತ್ತಿದ್ದನು.[೭೩] ಪ್ರಸಿದ್ಧಿಯಾದ ಕಲ್ಹೋಳಿ ಶಾಸನ ಈತನದ್ದೇ ಆಗಿದೆ. ನಾಲ್ಕನೆಯ ಕಾರ್ತವೀರ್ಯನ ನಂತರ ತನ್ನ ಸಹೋದರನಾದ ಮಲ್ಲಿಕಾರ್ಜುನ ಅಧಿಕಾರ ಪಡೆದನು. ಮಲ್ಲಿಕಾರ್ಜುನನ ಅವಧಿಯ ನಂತರ ಎರಡನೆಯ ಲಕ್ಷ್ಮೀಸೇನ ಪಟ್ಟಕ್ಕೆ ಬಂದನು. ಇವನ ಆಸ್ಥಾನದಲ್ಲಿಯೂ ಹಲವಾರು ಕವಿಗಳು ಗ್ರಂಥಕಾರರು ಆಶ್ರಯವನ್ನು ಪಡೆದಿದ್ದರು. ಇವನಿಗೆ 'ರಟ್ಟರಾಜ್ಯ ಪ್ರತಿಷ್ಠಾಪನಾಚಾರ್ಯ' ಹಾಗೂ 'ಬೊಪ್ಪಣಸಿಂಘ' ಎಂಬ ಬಿರುದುಗಳು ಈತನಿಗಿದ್ದವು.[೭೪] ಈತನೇ ರಟ್ಟರ ಕೊನೆಯ ದೊರೆಯೆಂಬುದಾಗಿ ತಿಳಿದುಬರುತ್ತದೆ. ಏಕೆಂದರೆ ದೇವಗಿರಿಯ ಯಾದವರು (ಸೇವುಣರು) ಪ್ರಬಲರಾಗಿ ಈ ಪ್ರದೇಶಗಳನ್ನು ಆಕ್ರಮಿಸತೊಡಗಿದರು.

ಕೊಣ್ಣೂರು ಪರಿಸರದಲ್ಲಿಯೂ ಕೂಡಾ ರಟ್ಟರು ತಮ್ಮ ಪ್ರಾಬಲ್ಯವನ್ನು ಮೆರೆದಿರುವುದು ಶಾಸನಗಳಿಂದ ತಿಳಿದುಬರುವ ವಿಷಯವಾಗಿದೆ. ಕಲ್ಲೊಳ್ಳಿ, ಗೋಕಾಕ್, ಕೊಣ್ಣೂರು, ಗೋಕಾಕ್ ಜಲಪಾತ ಮತ್ತು ರಾಯಬಾಗದಲ್ಲಿ ಅವರ ಶಾಸನಗಳು ಲಭ್ಯವಾಗಿವೆ. ೧೨೦೪ರ ಕಲ್ಲೊಳ್ಳಿಯ ಶಾಸನವು[೬೫] ರಟ್ಟರ ಪ್ರಸಿದ್ಧ ದೊರೆ ನಾಲ್ಕನೆಯ ಕಾರ್ತವೀರ್ಯನ ಕಾಲಕ್ಕೆ ಸಂಬಂಧಿಸಿದೆ. ಇದರಲ್ಲಿ ರಟ್ಟರ ವಂಶವನ್ನು ಕುರಿತು ಮತ್ತು ಕೆಲ ದಾನದತ್ತಿಗಳನ್ನು ಕುರಿತು ಪ್ರಸ್ತಾಪಿಸಲಾಗಿದೆ. ಕಾರ್ತವೀರ್ಯನ ರಾಜಾವಳಿಯನ್ನು ನಾಲ್ಕನೆಯ ತಲೆಮಾರಿನವರೆಗೆ ಕೊಡಲಾಗಿದೆ.




ಅದೇ ರೀತಿಯಾಗಿ ಕೊಣ್ಣೂರಿನಲ್ಲಿ ದೊರೆತ ಶಾಸನದಲ್ಲಿ[೬೬] ರಟ್ಟರ ದೊರೆ ಸೇನಮಲ್ಲನ ಉಲ್ಲೇಖಗಳಿವೆ. ಈತನು ಆರನೆಯ ವಿಕ್ರಮಾದಿತ್ಯನ ಮಹಾಸಾಮಂತನಾಗಿದ್ದನು. ಸೇನನ ನಂತರ ಬಂದ ಇಮ್ಮಡಿ ಕಣ್ಣ ಅಥವಾ ಕಣ್ಣಕೈರ ಬಗ್ಗೆ ಉಲ್ಲೇಖಿತ ಶಾಸನಗಳಿವೆ.[೬೭] ಈತನು ಸಹ ಆರನೆಯ ವಿಕ್ರಮಾದಿತ್ಯನ ಅಧಿಕಾರಿಯಾಗಿದ್ದು, ವಿಕ್ರಮಾದಿತ್ಯನ ಮಗ ಜಯಕರ್ಣನ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿದ್ದನೆಂಬುದಾಗಿ ತಿಳಿದುಬರುತ್ತದೆ.[೬೮] ರಟ್ಟರ ಮುಮ್ಮಡಿ ಕಾರ್ತವೀರ್ಯ ದೊರೆಯ ಪ್ರಸ್ತಾಪಗಳು ಈ ಭಾಗದಲ್ಲಿ ದೊರೆತ ಕೆಲ ಶಾಸನಗಳಲ್ಲಿ ಕಂಡುಬರುತ್ತವೆ. ಕೊಣ್ಣೂರಿನ ಶಾಸನದಲ್ಲಿ[೬೯] ಈತನನ್ನು ಮಹಾಮಂಡಳೇಶ್ವರ ಹಾಗೂ ಚಕ್ರವರ್ತಿ ಎಂದು ಕರೆಯಲಾಗಿದೆ. ಮಹಾಮಂಡಳೇಶ್ವರ ಎಂಬ ಬಿರುದಿನೊಂದಿಗೆ ಚಕ್ರವರ್ತಿ ಎಂಬ ಬಿರುದನ್ನು ಉಲ್ಲೇಖಿಸಿರುವುದು ಇಲ್ಲಿ ಗಮನಿಸಬೇಕಾದ ಅಂಶ. ನಾಲ್ಕನೆಯ ಕಾರ್ತವೀರ್ಯನನ್ನು ಕುರಿತು, ಕಲ್ಲೊಳ್ಳಿಯ ಶಾಸನದಲ್ಲಿ ಪ್ರಮುಖವಾದ ಮಾಹಿತಿಗಳಿವೆ.[೭೦] ಚಿಕ್ಕೋಡಿ ತಾಲೂಕಿನ ಕೆರೂರು ಶಾಸನದಲ್ಲಿ ರಟ್ಟರ ಕತ್ತಮರಸ ಹಾಗೂ ಹೆಮ್ಮಾಡಿದೇವರು ಗೋಕಾವಿಯಿಂದ ಕೊರವಳ್ಳಿ - ೧೫೦ ನ್ನು ನೋಡಿಕೊಳ್ಳುತ್ತಿದ್ದರೆಂದು ಉಲ್ಲೇಖಗಳಿವೆ.[೭೧]

ಹೀಗೆ ಈ ಮೇಲಿನ ಎಲ್ಲಾ ಉಲ್ಲೇಖಗಳನ್ನು ಗಮನಿಸಿದಾಗ ರಟ್ಟರು ಕೊಣ್ಣೂರು ಪರಿಸರದ ಆಡಳಿತದಲ್ಲಿ ಸಾಮಂತ, ಮಹಾಸಾಮಂತ ಮಹಾಮಂಡಳೇಶ್ವರ ಹಾಗೂ ಸ್ವತಂತ್ರ ದೊರೆಗಳಾಗಿ ಪ್ರಮುಖ ಪಾತ್ರವಹಿಸಿರುವುದು ಸ್ಪಷ್ಟವಾಗುತ್ತದೆ. ಸಮರ್ಥ ಆಡಳಿತ ಸಂಘಟಿತರಾಗಿದ್ದ ಅವರು ಸಾಮಾಜಿಕ,

ಧಾರ್ಮಿಕ ಚಟುವಟಿಕೆಯಲ್ಲಿ ಸಕ್ರೀಯವಾಗಿದ್ದರೆಂದು ತಿಳಿಯುತ್ತದೆ. ಕಲೆ, ಸಾಹಿತ್ಯದಂತಹ ಕ್ಷೇತ್ರಕ್ಕೆ ಪ್ರೋತ್ಸಾಹ ನೀಡಿದರು.

**ಕಲಚೂರಿಗಳು :**

ಇವರು ಕರ್ನಾಟಕದಲ್ಲಿ ಕಲ್ಯಾಣ ಚಾಲುಕ್ಯ ದೊರೆಗಳ ಸಾಮಂತರಾಗಿ ತದನಂತರ ಸ್ವತಂತ್ರರಾಗಿ ಆಳಿದರು. ಕಲ್ಯಾಣದ ಚಾಲುಕ್ಯರ ಸಂಬಂಧಿಕರೂ ಆಗಿದ್ದ ಇವರು ಬಿಜ್ಜಳನ ಕಾಲದಲ್ಲಿ ಪ್ರಾಬಲ್ಯಕ್ಕೆ ಬಂದರು. ಬೆಳಗಾವಿ ಜಿಲ್ಲೆಯಲ್ಲಿ ಇವರ ಕಾಲದ ಸಾಕಷ್ಟು ಶಾಸನಗಳು ಲಭ್ಯವಾಗಿದ್ದು, ಅದೇ ರೀತಿಯಾಗಿ ಕೊಣ್ಣೂರು ಪರಿಸರದಲ್ಲಿಯೂ ಇವರನ್ನು ಉಲ್ಲೇಖಿಸುವ ಕೆಲವು ಶಾಸನಗಳು ಲಭ್ಯವಾಗಿವೆ. ಗೋಕಾಕ್ ಜಲಪಾತದ ಹತ್ತಿರವಿರುವ ಮಹಾಲಿಂಗೇಶ್ವರ ದೇವಾಲಯದಲ್ಲಿರುವ ಶಾಸನ[೮೪]ಗಳಲ್ಲಿ ಕಲಚೂರಿ ದೊರೆಗಳನ್ನು ಕುರಿತು ಉಲ್ಲೇಖಗಳಿವೆ. ಕಲಚೂರಿಗಳ ಕಾಲದ ಕೆಲವು ಅಧಿಕಾರಿಗಳನ್ನು ಪ್ರಸ್ತಾಪಿಸಲಾಗಿದೆ. ಅದರಲ್ಲಿಯೂ ವಿಶೇಷವಾಗಿ ಕಲಚೂರಿ ಚಕ್ರವರ್ತಿ ಭುಜಬಲಮಲ್ಲ ಹಾಗೂ ತ್ರಿಭುವನಮಲ್ಲ ಸೋವಿದೇವನ ಉಲ್ಲೇಖಗಳಿವೆ. ಕುಂದರಗಿ ಕಂಪಣದಲ್ಲಿದ್ದ ಕೊಂಡನೂರಿನ(ಕೊಣ್ಣೂರು)ಲ್ಲಿನ ತಟೇಶ್ವರ ದೇವಾಲಯಕ್ಕೆ ಅಧಿಕಾರಿಯಾದ ಪೆರ್ಗಡೆ ಧನ್ನುಗದೇವನು ದಾನ-ದತ್ತಿಗಳನ್ನು ನೀಡಿದ ಮಾಹಿತಿಗಳಿವೆ.[೮೫] ತಟೇಶ್ವರ ದೇವಾಲಯವೆಂದರೆ ಇಂದಿನ ಮಹಾಲಿಂಗೇಶ್ವರ ದೇವಾಲಯ. ನದಿಯ ದಡದಲ್ಲಿ (ತಟದಲ್ಲಿ) ಇರುವ ಕಾರಣ ತಟೇಶ್ವರ ಎಂಬ ಹೆಸರು ಬಂದಿರಲು ಸಾಧ್ಯ. ಈ ಮಹಾಲಿಂಗೇಶ್ವರ ದೇವಾಲಯವು ಗೋಕಾಕ್ ಜಲಪಾತದ ಬಳಿಯಿರುವ ದೇವಾಲಯಗಳ ಸಂಕೀರ್ಣ(Temple Complex)ದಲ್ಲಿಯೇ ದೊಡ್ಡದಾದ ದೇವಾಲಯ. ಅದೇ ರೀತಿಯಾಗಿ ಸೋವಿದೇವನ ಅಧಿಕಾರಿಗಳಾದ ಸೋವಣ ಮತ್ತು ಮಹಾಮಂಡಳೇಶ್ವರ ಕತ್ತಮನ ಉಲ್ಲೇಖಗಳಿವೆ.[೮೬] ಹೀಗೆ ಕಲಚೂರಿಗಳು ಕೂಡ ಕೂಂಡಿ ೩೦೦೦ ನಾಡಿನಲ್ಲಿನ ರಾಜಕೀಯದಲ್ಲಿ ಪ್ರಮುಖ ಪಾತ್ರವಹಿಸಿದ್ದರೆಂಬುದಾಗಿ ಎಂಬುದಾಗಿ ಶಾಸನೋಕ್ತ ದಾಖಲೆಗಳಿಂದ ತಿಳಿಯುತ್ತದೆ.

**ಸೇವುಣರು :**

ರಟ್ಟರ ಅಧಿಕಾರವನ್ನು ಅಂತ್ಯಗೊಳಿಸಿದ ದೇವಗಿರಿಯ ಸೇವುಣರು ಬೆಳಗಾವಿ ಜಿಲ್ಲೆಯಲ್ಲಿ ಆಳ್ವಿಕೆ ನಡೆಸಿದರೆನ್ನಲು ಹಲವಾರು ಪುರಾವೆಗಳಿವೆ. ಗೋಕಾಕ್ ತಾಲೂಕಿನ ಮಮದಾಪುರದಲ್ಲಿ ದೊರೆತ ಶಾಸನವು[೮೭] ಸೇವುಣರ ದೊರೆ ಕನ್ನರಸನ (ಕನ್ನರ) ಕಾಲದ್ದು. ಮಾಳವ, ಗೂರ್ಜರನ್ನು ಸೋಲಿಸಿದ್ದಾಗಿ ಹಾಗೂ ದೇವಗಿರಿಯನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ಆಡಳಿತ ನಿರ್ವಹಿಸಿರುವ ದಾಖಲೆಗಳಿವೆ. ಈ ಶಾಸನದಲ್ಲಿ ಅಂದಿನ ಕೆಲವು ಪ್ರಸಿದ್ಧ ಭೌಗೋಳಿಕ ಪ್ರದೇಶಗಳನ್ನು ಉಲ್ಲೇಖಿಸಲಾಗಿದೆ. ಕುಂತಳದೇಶ, ಕುಹಂಡಿನಾಡು ೩೦೦೦, ಕುರುಂಬೆಟ್ಟ ಕಂಪಣ ಮುಂತಾದವು ಚಿಕ್ಕ ಆಡಳಿತ ವಿಭಾಗದ ಬಗೆಗೆ ವಿವರಿಸಲಾಗಿದೆ. ಅಂದು ಕುರುಂಬೆಟ್ಟ (ಇಂದಿನ ಶಿಂದಿಕುರುಬೆಟ್ಟ)ವು ಸುಪ್ರಸಿದ್ಧ ಬಣಂಜುಗಳ ಪಟ್ಟಣ

ಹಾಗೂ ವ್ಯಾಪಾರಿಕೇಂದ್ರವಾಗಿತ್ತು. ಇದೇ ಪರಿಸರದಲ್ಲಿ ಬರುವ ಅರ್ಜುನವಾಡ ಶಾಸನ (ಹುಕ್ಕೇರಿ ತಾಲೂಕು)[೮೭]ದಲ್ಲಿ ಬಸವಣ್ಣನವರ ಹಾಗೂ ಅವರ ವಂಶಜರ ಹೆಸರುಗಳನ್ನು ಉಲ್ಲೇಖಿಸುತ್ತದೆ. ಬಸವಣ್ಣನ ಅಣ್ಣ ದೇವರಾಯ, ದೇವರಾಯನ ಮೊಮ್ಮಗ ಹಾಲಬಸವದೇವ ಹಾಗೂ ಇನ್ನಿತರ ಅಧಿಕಾರಿಗಳ ಹೆಸರುಗಳನ್ನು ಸಹ ಈ ಶಾಸನದಲ್ಲಿ ಪ್ರಸ್ತಾಪಿಸಲಾಗಿರುವ ವಿಷಯಗಳು ತುಂಬಾ ಮಹತ್ವವಾಗಿವೆ.

**ವಿಜಯನಗರ :**

ಕರ್ನಾಟಕದಲ್ಲಿ ಸು. ೨ ಶತಮಾನಗಳಿಗಿಂತಲೂ ಹೆಚ್ಚು ವರ್ಷಗಳ ಕಾಲ ಆಳಿದ ವಿಜಯನಗರ ಸಾಮ್ರಾಜ್ಯಕ್ಕೆ ಸಂಬಂಧಪಟ್ಟ ಶಾಸನಗಳು ಬೆಳಗಾವಿ ಜಿಲ್ಲೆಯಲ್ಲಿ ದೊರಕಿವೆ. ಆದರೆ ಕೊಣ್ಣೂರು ಪರಿಸರದಲ್ಲಿ ಯಾವುದೇ ದಾಖಲೆಗಳು ಲಭ್ಯವಾಗಿಲ್ಲ. ಸೇವುಣರ ನಂತರ ಕೊಣ್ಣೂರು ಪರಿಸರ ವಿಜಯನಗರ ಆಡಳಿತಕ್ಕೆ ಒಳಪಡದೆ ಶಾಹಿಸುಲ್ತಾನರ ಆಡಳಿತಕ್ಕೆ ಒಳಪಟ್ಟ ನಿದರ್ಶನಗಳಿವೆ. ಅವರ ಕಾಲದ ಅನೇಕ ಐತಿಹಾಸಿಕ ಮಾಹಿತಿಗಳು, ಇಸ್ಲಾಮಿಕ್ ಮಾದರಿಯ ರಚನೆಗಳು, ಕೋಟೆ ಕೊತ್ತಲುಗಳು ಈ ಪರಿಸರದ ಗ್ರಾಮಗಳಲ್ಲಿ ಕಂಡುಬರುತ್ತವೆ. ಆದರೆ ಪ್ರಸ್ತುತ ಅಧ್ಯಯನದ ವ್ಯಾಪ್ತಿಯ ಮಿತಿಯಿಂದ ಇದರ ಹಿನ್ನೆಲೆಯನ್ನು ವಿವರಿಸಲಾಗಿಲ್ಲ.

**ಆಡಳಿತ :**

ಭೌಗೋಳಿಕವಾಗಿ ವಿಸ್ತಾರವಾಗಿದ್ದ ರಾಜ್ಯವನ್ನು ಆಡಳಿತದ ದೃಷ್ಟಿಯಿಂದ ಅನೇಕ ಭಾಗಗಳಾಗಿ ವಿಂಗಡಿಸಿದ್ದರು. ಅವುಗಳನ್ನು ಮಂಡಲ, ನಾಡು, ಪ್ರಾಂತ, ಕಂಪಣ ಹಾಗೂ ಗ್ರಾಮಗಳೆಂದು ಕರೆಯುತ್ತಿದ್ದರು. ಈ ವ್ಯವಸ್ಥೆಯು ಎಲ್ಲಾ ರಾಜ್ಯಗಳಲ್ಲಿತ್ತು. ಹಾಗೂ ಆಡಳಿತವು ಸುಗಮವಾಗಿ ನಡೆಯಲು ಇದು ಅನಿವಾರ್ಯವೂ ಆಗಿತ್ತು. ಅಲ್ಲದೆ ರಾಜ್ಯಕ್ಕೆ ಮುಂಬರುವ ರಾಜನಿಗೆ ಒಂದು ರೀತಿಯಲ್ಲಿ ತಾಲೀಮನ ಕೇಂದ್ರವಾಗಿ ಕಾರ್ಯನಿರ್ವಹಿಸುತ್ತಿದ್ದವು. ಬೇರೆ ಬೇರೆ ಹೆಸರಿನಿಂದ ಕರೆಯುತ್ತಿದ್ದ ಆಡಳಿತ ಘಟಕಗಳ ಮುಂದೆ ಸಂಖ್ಯಾಸೂಚಿಗಳು ಬರುತ್ತವೆ. ಉದಾಹರಣೆಗೆ, ೧೨೦೦೦, ೩೦೦೦, ೧೫೦, ೧೨೦, ೧೫ ಮುಂತಾದವುಗಳು. ಇವು ಆ ವಿಭಾಗವು ಅಥವಾ ಘಟಕವು ಹೊಂದಿರುವ ಗ್ರಾಮ ಅಥವಾ ಹಳ್ಳಿಗಳ ಸೂಚಕವಾಗಿತ್ತು ಎಂಬುದು ಹೆಚ್ಚಿನವರ ಅಭಿಪ್ರಾಯವಾಗಿದೆ.

ಆಡಳಿತದ ದೊಡ್ಡ ಘಟಕವನ್ನು ಸಾಮಾನ್ಯವಾಗಿ ಮಂಡಲ ಎಂದು ಕರೆಯಲಾಗುತ್ತಿತ್ತು. ಕೆಲವರು ಇದಕ್ಕೆ ಗ್ರಾಮಗಳ ಸಂಖ್ಯೆಯೊಂದಿಗೆ ಹೋಲಿಸಿದ್ದಾರೆ. ಕಂದೂರಿ ಈಶ್ವರದತ್ತರು[೮೮] ಮಂಡಲದಲ್ಲಿ ೧೨೦೦೦ ಹಳ್ಳಿಗಳಿರುತ್ತಿದ್ದವೆಂದು ಹೇಳಿದ್ದಾರೆ. ನಾಡು ಎಂಬುದು ದೊಡ್ಡ ವಿಭಾಗ. ಕಂಪಣವೆಂದರೆ ಸಣ್ಣ ವಿಭಾಗವೆಂದು ಅಭಿಪ್ರಾಯಪಡಲಾಗಿದೆ. ಆದರೆ, ಶಾಸನಗಳಲ್ಲಿ ಸಣ್ಣ ಮತ್ತು ಅತಿಸಣ್ಣ ವಿಭಾಗಗಳಿಗೂ ನಾಡುಗಳೆಂದು ಬಳಸಿರುವುದು ತಿಳಿಯುತ್ತದೆ.[೮೯] ಕಂಪಣ ಎಂಬುದು ನಾಡಿಗಿಂತ ಚಿಕ್ಕ

ವಿಭಾಗ ಎನ್ನಲಾಗುತ್ತಿದೆ. ಅಂದರೆ ಒಂದು ಭಾಗದ ಉಪವಿಭಾಗ (Sub-unit)ಗಳೆಂದು ತಿಳಿಯುತ್ತದೆ. ಸಾಮಾನ್ಯವಾಗಿ ೧೦೦ಕ್ಕಿಂತ ಕಡಿಮೆ ಗ್ರಾಮಗಳನ್ನು ಒಳಗೊಂಡ ಪ್ರದೇಶಕ್ಕೆ ಕಂಪಣ ಎಂದು ಕರೆಯುತ್ತಿದ್ದರು. ಈಗಿನ ತಾಲೂಕು, ಹೋಬಳಿಗಳಿದ್ದಂತೆ.[೯೦] ಒಟ್ಟಿನಲ್ಲಿ ಮಂಡಲ, ನಾಡು, ಕಂಪಣಗಳ ಸಂಖ್ಯೆ ಹಾಗೂ ವಿಸ್ತಾರದ ಸ್ವರೂಪ ಮಾತ್ರ ಅನಿಶ್ಚಿತತೆಯಿಂದ ಕೂಡಿದ್ದವು. ಈ ವಿಭಾಗಗಳಲ್ಲಿ ಗಾವುಂಡ, ಸಾಮಂತ, ಮಹಾಸಾಮಂತ, ಮಂಡಳೇಶ್ವರ ಮತ್ತು ಮಹಾ ಮಂಡಳೇಶ್ವರ ಎಂಬ ಅಧಿಕಾರಿಗಳು ರಾಜನ ಪ್ರತಿನಿಧಿಯಾಗಿ ಸರ್ವಸ್ವತಂತ್ರನಾಗಿ ಆಳುತ್ತಿದ್ದರು.

ಕೊಣ್ಣೂರು ಪರಿಸರದಲ್ಲಿ ಆಳ್ವಿಕೆ ನಡೆಸಿರುವ ಅರಸರು ತಮ್ಮ ಆಡಳಿತದ ಅನುಕೂಲತೆಗಾಗಿ ವಿಭಾಗಗಳನ್ನು ಮಾಡಿಕೊಂಡಿದ್ದರು. ಕದಂಬರ, ಬದಾಮಿ ಚಾಲುಕ, ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯ, ಸವದತ್ತಿಯ ರಟ್ಟ, ಕಲಚೂರಿ ಮತ್ತು ಸೇವುಣರೂ ಪ್ರಾತಿನಿಧಿಕವಾಗಿ ಈ ಪರಿಸರದಲ್ಲಿ ಆಳ್ವಿಕೆ ಮಾಡಿದ್ದಾರೆ. ಮಂಡಲ, ನಾಡು, ಕಂಪಣ, ಎಂಬ ಹೆಸರಿನ ರಾಜಾಡಳಿತ ವ್ಯವಸ್ಥೆಯನ್ನು ಹೊಂದಿದ್ದರೆಂದು ಶಾಸನಗಳಿಂದ ತಿಳಿದುಬರುತ್ತದೆ. ಕೊಣ್ಣೂರು ಪ್ರದೇಶವು ಕುಂದರಿಗೆ ಕಂಪಣದಲ್ಲಿತ್ತು. ಇದು ಕೂಂಡಿ ೩೦೦೦ ನಾಡಿನ ಉಪವಿಭಾಗವಾಗಿತ್ತು. ಕೂಂಡಿ ೩೦೦೦ ನಾಡು ಬಹು ವಿಸ್ತಾರವಾದ ಪ್ರದೇಶವನ್ನು ಒಳಗೊಂಡಿತ್ತು. ಇದು ಕುಂತಲದೇಶದ ಭಾಗವಾಗಿತ್ತೆಂದು ಕೆಲ ಶಾಸನಗಳಿಂದ ತಿಳಿದುಬರುವ ವಿಷಯವಾಗಿದೆ.[೯೧] ಕೂಂಡಿನಾಡಿನ ವಿಸ್ತಾರ ಉತ್ತರಕ್ಕೆ ಕೃಷ್ಣಾ, ದಕ್ಷಿಣಕ್ಕೆ ಮಲಪ್ರಭಾ ಹಾಗೂ ಸವದತ್ತಿಯ ಭಾಗ, ಪೂರ್ವಕ್ಕೆ ತೊರಗಲೆನಾಡು ಮತ್ತು ಬೆಳ್ವಲ ೩೦೦[೯೨] ಆಡಳಿತ ವಿಭಾಗ ಹಾಗೂ ಪಶ್ಚಿಮದಲ್ಲಿ ಮಹಾರಾಷ್ಟ್ರದ ಗಡ್‌ಹಿಂಗ್ಲಜ ಮತ್ತು ಚಂದಗಡ ಪ್ರದೇಶದವರೆಗೆ ಹರಡಿತ್ತು[೯೩] ಸವದತ್ತಿಯ ರಟ್ಟರು ಕೂಹಂಡಿ ೩೦೦೦ ನಾಡಿನ ಅಧಿಪತಿಗಳಾಗಿದ್ದ ಸಂದರ್ಭದಲ್ಲಿ, ಗ್ರಾಮಗಳ ಕೂಟ, ಹೋಬಳಿ, ಕಂಪಣಗಳಂತಹ ಆಡಳಿತ ವಿಭಾಗಗಳನ್ನು ಮಾಡಿಕೊಂಡಿದ್ದರು. ಅವರ ಕಾಲದಲ್ಲಿ ೧೪ ಆಡಳಿತ ಉಪವಿಭಾಗಗಳಿದ್ದವೆಂದು ತಿಳಿದುಬರುತ್ತದೆ. ಅವುಗಳನ್ನು ಈ ಕೆಳಗಿನಂತೆ ವಿವರಿಸಬಹುದಾಗಿದೆ.

೧. ತೇರಿದಾಳ ಹನ್ನೆರಡು[೯೪] (ಇಂದಿನ ತೇರದಾಳ)

೨. ಕುರುಂಬೆಟ್ಟ ಕಂಪಣ[೯೫] (ಇಂದಿನ ಶಿಂದಿಕುರುಬೆಟ್ಟ)

೩. ವೇಣುಗ್ರಾಮ[೯೬] (ಬೆಳಗಾವಿ)

೪. ಕುಂದರರಿ ಕಂಪಣ[೯೭]

೫. ಉತ್ಸುಗಾಂವ್[೯೮] (ಬೆಳಗಾವಿ ಜಿಲ್ಲೆಯ ಉಚಗಾಂವ್)

೬. ಸೋಲ-೩೦ (ಸೊಗಲ)[೯೯]

೭. ಹುಬಳ್ಳಿ (ಮುಗುಟಖಾನ್ ಹುಬ್ಬಳ್ಳಿ)[೧೦೦]

೮. ಸುಂಗಧವರ್ತಿ (ಸಾಂದತ್ತಿ)[೧೦೧]

೯. ಕೊರವಳ್ಳಿ-೧೫೦[೧೦೨] (ಇಂದಿನ ಚೊಡಕುರಳಿ)

೧೦. ನೂಲೆನಾಡು[೧೦೩] (ಚಿಕ್ಕೋಡಿ-ಹುಕ್ಕೇರಿ ತಾಲೂಕಿನಲ್ಲಿರುವ ಕೆಲವು ಪ್ರದೇಶಗಳು)

೧೧. ನೇಸರ್ಗಿ ೬[೧೦೪]

೧೨. ಹೂವಿನಭಾಗ[೧೦೫] (ರಾಯಬಾಗ)

೧೩. ಹರಗಟ್ಟಿ ಸಪ್ತತಿ (ಯರಗಟ್ಟಿ)[೧೦೬]

೧೪. ಕೊಂಡಿ ಪಟ್ಟಣ[೧೦೭]

ಕೂಹಂಡಿ ೩೦೦೦ ಆಡಳಿತ ವಿಭಾಗದ ರಾಜಧಾನಿಪಟ್ಟಣ ಯಾವುದಾಗಿತ್ತೆಂಬುದುರ ಬಗ್ಗೆ ವಿದ್ವಾಂಸರಲ್ಲಿ ಒಮ್ಮತವಿಲ್ಲ. ಅದು ಹಾಳಾದ ಒಂದು ಪಟ್ಟಣ. ಕೆಲವು ವಿದ್ವಾಂಸರು ಚಿಕ್ಕೋಡಿ, ತಾಲೂಕಿನ 'ಹಿರೇಕೋಡಿ'ಯೇ ಕೂಹಂಡಿ ಪಟ್ಟಣವಾಗಿತ್ತೆಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಫ್ಲೀಟರ ಪ್ರಕಾರ[೧೦೮] ಕೂಂಡಿ ಎಂಬ ಊರಿನಿಂದಲೇ, ಕೂಂಡಿಪಟ್ಟಣ ಎಂಬ ಹೆಸರು ಬಂದಿರಬಹುದು. ಆದರೆ ಅವರು ಪಡುವ ಅಭಿಪ್ರಾಯಕ್ಕೆ ಪೂರಕ ಆಧಾರಗಳಿಲ್ಲ ಎಂದಿದ್ದಾರೆ. ಅದೇ ರೀತಿ ಎಂ.ಎಂ.ಕಲಬುರ್ಗಿಯವರು ಚಿಕ್ಕೋಡಿ ತಾಲೂಕಿನ ಹಿರೇಕೂಡಿ ಅಥವಾ ಚಿಕ್ಕೋಡಿ ಪಟ್ಟಣವು ಆಗಿದ್ದಿರಬಹುದೆಂದು ಅಭಿಪ್ರಾಯಿಸಿದ್ದಾರೆ. ಶಾಸನ ತಜ್ಞರಾದ ಹನುಮಾಕ್ಷಿ ಗೋಗಿ ಅವರು ಮೇಲಿನ ಅಭಿಪ್ರಾಯವನ್ನು ಒಪ್ಪಿ ಅದೇ ಗ್ರಾಮದಲ್ಲಿ (ಹಿರೇಕೂಡಿ) ಹಲವಾರು ಅವಶೇಷಗಳನ್ನು ಪತ್ತೆಹಚ್ಚಿ ಅರ್ಥೈಸುವ ಪ್ರಯತ್ನ ಮಾಡಿದ್ದಾರೆ. ಆದರೆ ಯಾವುದೇ ಸ್ಪಷ್ಟ ಅಭಿಪ್ರಾಯಕ್ಕೆ ಬರಲಾಗಿಲ್ಲ.

ಇಲ್ಲಿ ನಾವು ಗಮನಿಸಬೇಕಾದ ಮತ್ತೊಂದು ಅಂಶವೆಂದರೆ, ಈ ಕೂಹಂಡಿ ೩೦೦೦ ನಾಡಿನ ಪ್ರಾದೇಶಿಕ ವಿಸ್ತಾರ, ಉತ್ತರದಲ್ಲಿ ಕೃಷ್ಣಾನದಿಯಿಂದ ದಕ್ಷಿಣದ ಮಲಪ್ರಭಾ ನದಿಯವರೆಗೆ ಪಶ್ಚಿಮದ ಕೊಲ್ಲಾಪುರದಿಂದ ಪೂರ್ವದ ತೊರಗಲೆನಾಡಿನವರೆಗೆ ವಿಸ್ತಾರ ಹೊಂದಿತ್ತು. ಕುಂದರಿಗೆ ಕಂಪಣ, ಈ ವಿಸ್ತಾರವಾದ ನಾಡಿನ ಕೇಂದ್ರಸ್ಥಾನದಲ್ಲಿತ್ತು. ಹಾಗೂ ಅಂದಿನ ರಾಜಕೀಯ ಮತ್ತು ಧಾರ್ಮಿಕ ಕ್ಷೇತ್ರದಲ್ಲಿ ಪ್ರಮುಖ ಪಾತ್ರವಹಿಸಿರುವುದು ಶಾಸನಗಳಿಂದ ತಿಳಿದುಬರುವ ವಿಷಯ. ಇಡೀ ರಾಜ್ಯದ ಕೇಂದ್ರದಲ್ಲಿರುವುದಿಂದ ಆಡಳಿತದ ನಿಯಂತ್ರಣಕ್ಕೆ ಅನುಕೂಲವಾದ ಪ್ರದೇಶವಾಗಿತ್ತು. ಈ ಕುಂದರಿಗೆಯೆ ಬಹುಶಃ ಕೂಹಂಡಿ ೩೦೦೦ ನಾಡಿನ ರಾಜಧಾನಿಯಾಗಿರಬಹುದೆಂದು ತರ್ಕಿಸಬಹುದಾಗಿದೆ. ಇಲ್ಲಿಯೂ ಸಹ ಪ್ರಾಚೀನವಾದ ಅನೇಕ ಅವಶೇಷಗಳು ಹೇರಳವಾಗಿ ಕಂಡುಬರುತ್ತವೆ. ಒಂದೆರಡು ಶಾಸನಗಳಲ್ಲಿ ಕೂಹಂಡಿ ನಾಡಿನ ವಿಸ್ತರಣೆಯ ಬಗೆಗೆ ಹೇಳುತ್ತವೆಯೇ ಹೊರತು ಇದು ಆ ಪ್ರದೇಶದ ರಾಜಧಾನಿಪಟ್ಟಣವಾಗಿತ್ತೆಂದು ನಿರ್ದಿಷ್ಟವಾದ ಯಾವ ಸೂಚನೆಗಳನ್ನು ನೀಡುವುದಿಲ್ಲ. ಹೀಗಾಗಿ ಸ್ಪಷ್ಟವಾಗಿ ಅಭಿಪ್ರಾಯಿಸುವುದು ಕಷ್ಟ ಸಾಧ್ಯ.

ನಮ್ಮ ಪ್ರಸ್ತುತ ಅಧ್ಯಯನದ ವ್ಯಾಪ್ತಿಯಲ್ಲಿ ಕುಂದರಿಗೆ ಕಂಪಣ, ಕುರುಂಬೆಟ್ಟ ಕಂಪಣ ಹಾಗೂ ಮಧ್ಯಕಾಲೀನ ನಂತರ ಬರುವ ಅಂಕಲೆ, ಪರಗಣ, ಪಾಚ್ಛಾಪುರ, ಪರಗಣ ಹಾಗೂ ಗೋಕಾಕಗಳು ಪ್ರಮುಖವಾದ ಆಡಳಿತದ ವಿಭಾಗಗಳಾಗಿ ಈ ಪರಿಸರದಲ್ಲಿ ಅಸ್ತಿತ್ವದಲ್ಲಿದ್ದವು. ಅವನ್ನು ಸಿಕ್ಕಿರುವ ಕುರುಹುಗಳ ಸಹಾಯದಿಂದ ಹಾಗೂ ಕ್ಷೇತ್ರಕಾರ್ಯದ ಮೂಲಕ ಪಡೆದ ಮಾಹಿತಿಗಳ ಮೂಲಕ ವಿವರಿಸುವ ಹಾಗೂ ಅರ್ಥೈಸುವ ಪ್ರಯತ್ನ ಮಾಡಲಾಗಿದೆ.

**ಕುರುಂಬೆಟ್ಟ ಕಂಪಣ :**

ಇದು ಇಂದಿನ ಗೋಕಾಕ ತಾಲೂಕಿನಲ್ಲಿರುವ ಕುರುಬೆಟ್ಟ ಅಥವಾ ಶಿಂದಿಕುರುಬೆಟ್ಟ ಗ್ರಾಮ. ಅಲ್ಲಿ ಶೇಂದಿಗಿಡಗಳು ಹೆಚ್ಚಾಗಿ ಬೆಳೆಯುವುದರಿಂದ ಆ ಊರಿಗೆ ಈ ಹೆಸರು ಬಂದಿದೆ. ಆದರೆ ಶಬ್ದಶಹ ಅರ್ಥೈಸುವುದಾದರೆ ಕುರುಂ+ಬೆಟ್ಟ- ಕುರುಬೆಟ್ಟ. ಅಂದರೆ ಚಿಕ್ಕ ದೊಡ್ಡ ಬೆಟ್ಟಗಳನ್ನೊಳಗೊಂಡ ಪ್ರದೇಶವೆನ್ನಬಹುದು. ಕುರುಂಬೆಟ್ಟ ಎಂಬ ಶಬ್ದ ಜನಾಂಗ-ವಾಚಕವಾಗಿಯೂ ಇರಬಹುದು. ಕುರುಂಬ+ಬೆಟ್ಟ- ಕುರುಬೆಟ್ಟ ಎಂದು ಆಗಿರಬಹುದು. ಆದರೆ ಕ್ಷೇತ್ರಕಾರ್ಯಗಳನ್ನು ಕೈಗೊಂಡಾಗ ಆ ಪರಿಸರದಲ್ಲಿ ಚಿಕ್ಕ ಪುಟ್ಟ ಗುಡ್ಡ ಬೆಟ್ಟಗಳು ಕಂಡುಬರುತ್ತಿದ್ದು ಅದರಿಂದಲೇ ಈ ಪ್ರದೇಶಕ್ಕೆ ಕುರಂಬೆಟ್ಟ ಎಂದು ಹೆಸರಾಗಿರಬಹುದು. ಪ್ರಾಚೀನ ಕಾಲದಲ್ಲಿ ಸುಪ್ರಸಿದ್ಧವಾದ ಬಣಂಜುಗಳ ಪಟ್ಟಣವಾಗಿತ್ತೆಂದು ಶಾಸನಗಳಿಂದ ತಿಳಿದುಬರುವ ವಿಷಯ.[೧೯] ಇಂದಿಗೂ ಸಹ ಇದೊಂದು ಪ್ರಮುಖ ವ್ಯಾಪಾರಿ ಕೇಂದ್ರವಾಗಿ ಕಾರ್ಯನಿರ್ವಹಿಸುತ್ತಿದೆ. ಕುರಂಬೆಟ್ಟ ಕಂಪಣದ ವಿಸ್ತಾರ ರಾಯಬಾಗ ತಾಲೂಕಿನ ಬಾಡಕಂಕಣೂರು (ಇಂದಿನ ಕಂಕಣವಾಡಿ) ಪ್ರದೇಶದವರೆಗೆ ವಿಸ್ತರಿಸಿತ್ತು. ಕೂಹಂಡಿ ನಾಡಿನಲ್ಲಿದ್ದ ಈ ಚಿಕ್ಕ ಆಡಳಿತ ಘಟಕವು ಪ್ರಾಚೀನ ಕಾಲದ ಆಡಳಿತದ ಅವಶೇಷಗಳನ್ನು ಈವರೆಗೂ ಉಳಿಸಿಕೊಂಡು ಬಂದಿರುವುದು. ಇದೇ ಪರಿಸರದಲ್ಲಿ ಗೋಕಾಕ ಜಲಪಾತದ ಎಡಭಾಗದಲ್ಲಿರುವ ಕಾಡಸಿದ್ಧೇಶ್ವರ ಹಾಗೂ ದತ್ತಾತ್ತೇಯ ದೇವಾಲಯಗಳು ಬರುತ್ತವೆ. ಹದಿನಾರನೆಯ ಶತಮಾನದ ನಂತರ ಇಲ್ಲಿ ದೇಸಾಯಿಗಳು ಆಳ್ವಿಕೆ ನಡೆಸಿದರು. ಆ ಕಾಲದ ಶಿಥಿಲವಾದ ಕೋಟೆ ಹಾಗೂ ಕಾವಲುಗೋಪುರದ ಅವಶೇಷಗಳನ್ನು ಇಂದಿಗೂ ಕಾಣಬಹುದಾಗಿದೆ.

**ಕುಂದರಗಿ ಕಂಪಣ :**

ಪ್ರಸ್ತುತ ಗೋಕಾಕ್ ತಾಲೂಕಿನಲ್ಲಿರುವ ಚಿಕ್ಕ ಗ್ರಾಮ. ಗೋಕಾಕ್ ಪಟ್ಟಣದ ನೈರುತ್ಯಕ್ಕಿರುವ ಈ ಗ್ರಾಮದ ಪಕ್ಕದಲ್ಲಿ ಮಾರ್ಕಂಡೇಯ ನದಿಯೂ ಹರಿದಿರುವುದು. ಪೂರ್ವಾಭಿಮುಖವಾಗಿ ಹರಿಯುವ ನದಿಯು ಈ ಗ್ರಾಮದ ಸಮೀಪ ಪಶ್ಚಿಮಾಭಿಮುಖವಾಗಿ ತಿರುವು ಪಡೆದುಕೊಂಡು ಹರಿಯುತ್ತದೆ. ಕೂಹಂಡಿ ೩೦೦೦ ನಾಡಿನ ಮಧ್ಯದಲ್ಲಿದೆ. ಬಹುಶಃ ಇದೇ ಅಂದಿನ ಕೂಹಂಡಿ ೩೦೦೦ ದೇಶದ ಆಡಳಿತ ಕೇಂದ್ರಸ್ಥಾನವಾಗಿರಬಹುದೆಂದು ಈಗಾಗಲೇ ಪ್ರಸ್ತಾಪಿಸಲಾಗಿದೆ. ಗೋಕಾಕ್ ಜಲಪಾತದ ಬಳಿಯಿರುವ

ಮಹಾಲಿಂಗೇಶ್ವರ ದೇವಾಲಯದಲ್ಲಿರುವ ಶಾಸನದಲ್ಲಿ ಕುಂದರಿಗೆ ಕಂಪಣದ ಉಲ್ಲೇಖಗಳಿವೆ.[೧೧೦] ಕುಂದರಿಗೆ ಅಂದಿನ ಪ್ರಸಿದ್ಧ ಕುಂದರನಾಡಿನ ಕೇಂದ್ರಸ್ಥಾನವಾಗಿತ್ತು. ಕುಂದರಗಿ ಎಂಬ ಹೆಸರಿನ ಆಸಕ್ತಿಯನ್ನು ಅವಲೋಕಿಸಿದಾಗ ನಮಗೆ ಹಲವಾರು ಅಭಿಪ್ರಾಯಗಳು ವ್ಯಕ್ತವಾಗುತ್ತವೆ. ಕುಂದ ಎಂಬ ಜೈನಸನ್ಯಾಸಿಗೆ ಸಂಬಂಧಿಸಿದಂತೆ ಈ ಗ್ರಾಮಸೂಚಿಯನ್ನು ವಿಶ್ಲೇಷಿಸಬಹುದಾಗಿದೆ. ಅದಕ್ಕೆ ಪೂರಕ ಮಾಹಿತಿಗಳ ಮಧ್ಯೆ ನಮಗೆ ಈ ಗ್ರಾಮದಲ್ಲಿ ಈವರೆಗೂ ಜೈನಪಂಥಕ್ಕೆ ಸೇರಿದ ಅನೇಕ ಅವಶೇಷಗಳು ಕಂಡುಬರುತ್ತವೆ. ಸುಮಾರು ಇಪ್ಪತ್ತು ವರ್ಷಗಳ ಹಿಂದೆ ಗ್ರಾಮದ ಗುಡ್ಡದ ಪಕ್ಕದಲ್ಲಿರುವ ನಿರ್ವಸತಿ ಪ್ರದೇಶದಲ್ಲಿ ಜೈನದೇವಾಲಯದ ಅಧಿಷ್ಠಾನವೊಂದು ಕಂಡುಬಂದಿದೆ. ಆದರೆ ಈ ಅಧಿಷ್ಠಾನವನ್ನು ಬಿಟ್ಟು ಯಾವುದೇ ಮುಖ್ಯ ಪೂರಕ ಅವಶೇಷಗಳು ಕಂಡುಬರುವುದಿಲ್ಲ. ಆದರೆ ಅಲ್ಲಲ್ಲಿ ಬಿಡಿಬಿಡಿಯಾಗಿ ಬಿದ್ದಿರುವ ಜೈನಶಿಲ್ಪದ ಅವಶೇಷಗಳನ್ನು ಕಾಣಬಹುದಾಗಿದೆ. ಕುಂದ ಎಂಬ ಜೈನಮುನಿಯಿಂದ ಈ ಗ್ರಾಮಕ್ಕೆ ಹೆಸರು ಬಂದಿರುವ ಸಾಧ್ಯತೆಗಳನ್ನು ಅಲ್ಲಗಳೆಯಲಾಗದು. ಕುಂದ ಎಂಬ ಶಬ್ದದ ಅರ್ಥವನ್ನು ಕುಬೇರನ ನವನಿಧಿಗಳಲ್ಲಿ ಒಂದು ಎಂದು ವಿವರಿಸಲಾಗಿದೆ. ಸಮೃದ್ಧಿಯಿಂದ ಕೂಡಿದ ಈ ಪ್ರದೇಶವನ್ನು ಕುಂದ ಎಂದು ರೂಪವಾಚಕವಾಗಿ ಬಳಸಿ ಕರೆದಿರುವ ವಾಡಿಕೆಯನ್ನು ಅಲ್ಲಗೆಳೆಯಲಾಗದು. ನಿಸರ್ಗ ಸೂಚಕವಾಗಿ ಅರ್ಥೈಸುವುದಾದರೆ ಕುಂದ ಎಂಬುದರ ಅರ್ಥ ಬೆಟ್ಟಗುಡ್ಡಗಳು ಎಂಬ ಅರ್ಥವಿದೆ. ಈ ಗ್ರಾಮ ಸುತ್ತಲೂ ಚಿಕ್ಕ ಚಿಕ್ಕ ಗುಡ್ಡಬೆಟ್ಟಗಳಿದ್ದು ಇದೊಂದು ಸುಂದರ ನಿಸರ್ಗ ತಾಣವಾಗಿ ಕಾಣುತ್ತದೆ. ಈ ಹಿನ್ನೆಲೆಯನ್ನು ಪರಿಗಣಿಸಲಾಗಿದೆ. ಕುಂದರಗಿಯಲ್ಲಿ ಶಾಸನವೊಂದು ಸಿಕ್ಕಿದ್ದು,[೧೧೧] ಅದು ಆರನೆಯ ವಿಕ್ರಮಾಧಿತ್ಯನ ಕಾಲದ್ದು. ಇದರಲ್ಲಿ ವಿಕ್ರಮನ ದಂಡಾಧಿಕಾರಿಗಳ ಮತ್ತು ಕಲಚೂರಿ ಜೋಗಮನ ಮಗ ಪೆರ್ಮಾಡಿಯರಸನ ಉಲ್ಲೇಖಗಳಿವೆ. ಪ್ರಸಿದ್ಧವಾದ ಕೊಂಡನೂರು (ಇಂದಿನ ಕೊಣ್ಣೂರು). ಈ ಕುಂದರಗಿ ಕಂಪಣದಲ್ಲಿತ್ತು.[೧೧೨] ಕುಂದರಿಗೆಯು ಕೂಹಂಡಿ ೩೦೦೦ ನಾಡಿನ ಜಿಲ್ಲೆಗಳಲ್ಲಿ (ಕಂಪಣ) ಒಂದಾಗಿತ್ತೆಂದು ಕೂಡ ತಿಳಿದುಬರುತ್ತದೆ. ಕೊಂಡನೂರು ಅಂದು ಪ್ರಸಿದ್ಧವಾದ ಜೈನ ಕೇಂದ್ರವಾಗಿತ್ತು.

**ಅಂಕಲೆ ಪರಗಣ :**

ಗೋಕಾಕ್ ತಾಲೂಕಿನ ಪಶ್ಚಿಮ ಭಾಗದಲ್ಲಿರುವ ಅಂಚಿನ ಗ್ರಾಮ. ಅಂಕಲಗಿ ಎಂಬ ಮರಗಳು ಈ ಪ್ರದೇಶದಲ್ಲಿ ಹೆಚ್ಚಾಗಿ ಬೆಳೆಯುವುದರಿಂದ ಇದಕ್ಕೆ ಈ ಹೆಸರು ಬಂದಿದೆ ಎಂಬುದು ಸ್ಥಳೀಯರ ಅಭಿಪ್ರಾಯ. ಇಲ್ಲಿನ ಲಕ್ಷ್ಮೀದೇವಾಲಯದ ಗರ್ಭಗೃಹದ ಹಿಂದಿನ ಗೋಡೆಯ ಮೇಲಿರುವ ಶಾಸನದಲ್ಲಿ[೧೧೩] ಈ ನಾಡಿನ ಉಲ್ಲೇಖವಿದೆ. ಬಳ್ಳಾರಿ ಹಳ್ಳದ ದಡದಲ್ಲಿರುವ ಈ ಗ್ರಾಮವು ಮಂದವಾದ ಕಪ್ಪುಮಣ್ಣಿನ ಪ್ರದೇಶವನ್ನು ಒಳಗೊಂಡಿದೆ. ಅಲ್ಲಿ ಹೆಸರುವಾಸಿಯಾದ ಅಡವಿಸಿದ್ಧೇಶ್ವರ ಮಠವಿದೆ. ಇದು ಅನುಭಾವಿ ಸಂತರ ಸಮೂಹಕ್ಕೆ ಸೇರುವ ಸಿದ್ಧೇಶ್ವರರು ತಮ್ಮ ಪವಾಡ ಹಾಗೂ ಧಾರ್ಮಿಕ ಕಾರ್ಯಗಳಿಂದ ಪ್ರಸಿದ್ಧಿಯನ್ನು ಪಡೆದಿದ್ದರು.

**ಈ ಪ್ರದೇಶದ ಶಾಸನಗಳಲ್ಲಿ ಕಂಡುಬರುವ ಅರಸರು :**

ಕೊಣ್ಣೂರು ಪರಿಸರದಲ್ಲಿ ದೊರಕಿದ ಶಾಸನಗಳನ್ನು ಅವಲೋಕಿಸಿದಾಗ ಅದರಲ್ಲಿ ಹಲವಾರು ಅಧಿಕಾರಿಗಳ, ಮಾಂಡಳಿಕರ ಹಾಗೂ ಗಾವುಂಡರ ಹೆಸರು ಕಂಡುಬರುತ್ತವೆ. ಆದಿಕದಂಬ, ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯ, ಸವದತ್ತಿಯ ರಟ್ಟ, ಕಲಚೂರಿ ಮತ್ತು ಸೇವುಣ ಸಾಮ್ರಾಜ್ಯಗಳ ಪ್ರಮುಖ ದೊರೆಗಳನ್ನು ಸಹ ಇಲ್ಲಿಯ ಶಾಸನಗಳಲ್ಲಿ ಉಲ್ಲೇಖಿಸಲಾಗಿದೆ.

ಆದಿಕದಂಬ ಅರಸರ, ದಾಮೋದರ,[೧೧೪] ರಾಷ್ಟ್ರಕೂಟರ ದೇಜ್ಜಮಹಾರಾಜ,[೧೧೫] ಕಲ್ಯಾಣದ ಚಾಲುಕ್ಯರ ಎರಡನೆಯ ಜಯಸಿಂಹ, ಒಂದನೆಯ ಸೋಮೇಶ್ವರ,[೧೧೬] ಆರನೆಯ ವಿಕ್ರಮಾಧಿತ್ಯ,[೧೧೭] ರಟ್ಟರ ನಾಲ್ಕನೇ ಕಾರ್ತವೀರ್ಯ,[೧೧೮] ಕಣ್ಣಕೈರ,[೧೧೯] ಸೇನ (ಸೇನಮಲ್ಲ),[೧೨೦] ಮೂರನೆಯ ಕಾರ್ತವೀರ್ಯ,[೧೨೧] ಕತ್ತಮ ಮಲ್ಲಿಕಾರ್ಜುನ,[೧೨೨] ಕಲಚೂರಿ ಭಜಬಲಮಲ್ಲ,[೧೨೩] ತ್ರಿಭುವನಮಲ್ಲ,[೧೨೪] ಸೇವುಣರ ಕಣ್ಣರ,[೧೨೫] ದೊರೆಗಳ ಉಲ್ಲೇಖಗಳು ದೊರೆಯುತ್ತವೆ. ಈ ಪ್ರಸಿದ್ಧ ರಾಜರುಗಳನ್ನು ಕೊಣ್ಣೂರ ಪರಿಸರದಲ್ಲಿ ಆಡಳಿತ ನಿರ್ವಹಿಸಿದ ನಿರ್ವಹಣಕಾರರು ತಮ್ಮ ಶಾಸನಗಳಲ್ಲಿ ಉಲ್ಲೇಖಿಸಿದ್ದಾರೆ.

**ಶಾಸನೋಕ್ತ ರಾಣಿಯರು :**

ಕೊಣ್ಣೂರು ಪರಿಸರದ ಶಾಸನಗಳಲ್ಲಿ ಹಲವಾರು ರಾಣಿಯರ ಹೆಸರುಗಳನ್ನು ಉಲ್ಲೇಖಿಸಲಾಗಿದೆ. ಪ್ರಾಚೀನ ಕಾಲದಿಂದಲೂ ರಾಣಿಯರು ಅರಸರಿಗೆ ಯುದ್ಧ ಆಡಳಿತ ಮತ್ತು ಸಾಂಸ್ಕೃತಿಕ ಕ್ಷೇತ್ರದಲ್ಲಿ ಸಹಾಯಕರಾಗಿ ಕಾರ್ಯನಿರ್ವಹಿಸಿದ್ದಾರೆ. ಸ್ವತಂತ್ರವಾಗಿ ತಮ್ಮ ಕೊಡುಗೆಗಳನ್ನು ಕೊಟ್ಟಿದ್ದಾರೆ. ಕೆಲವು ಕಡೆ ಅರಸರಿಗೆ ಸಹಾಯಕರಾಗಿ, ಮತ್ತೆ ಕೆಲವು ಕಡೆ ತಾವೇ ಸ್ವತಂತ್ರರಾಗಿ ಆಳಿದ್ದುಂಟು. ಕಲ್ಯಾಣ ಚಾಲುಕ್ಯರ ಎರಡನೆಯ ಜಯಸಿಂಹನ ಸಹೋದರಿ ಅಕ್ಕದೇವಿಯು ಕಿಸುಕಾಡು ೭೦ ನಾಡನ್ನು ಆಳುತ್ತಿದ್ದಳು. ಈಕೆಯ ಉಲ್ಲೇಖಗಳು ಬಾಗಲಕೋಟೆ ಜಿಲ್ಲೆಯ ಅರಸೀಬೀದಿಯಲ್ಲಿನ ಕ್ರಿ.ಶ.೧೦೪೭ರ ಶಾಸನದಲ್ಲಿ ದೊರೆಯುತ್ತವೆ.[೧೨೬] ವಿಕ್ರಮಪುರ (ಅರಸೀಬೀದಿ) ಈಕೆಯ ರಾಜಧಾನಿ. ಬಾದಾಮಿ ತಾಲೂಕಿನ ದಕ್ಷಿಣ ಭಾಗ ಹಾಗೂ ರೋಣ ತಾಲೂಕಿನ ಉತ್ತರ ಭಾಗದಲ್ಲಿ ಕಿಸುಕಾಡು ರಾಜ್ಯ ವ್ಯಾಪಿಸಿತು.[೧೨೭] ಪಟ್ಟದಕಲ್ಲು ಅದಕ್ಕೆ ರಾಜಧಾನಿಯಾಗಿತ್ತೆಂದು ಡಾ.ಫ್ಲೀಟರ ಅಭಿಪ್ರಾಯ. ಅಕ್ಕದೇವಿಯು ಗೋಕಾಗೆ (ಇಂದಿನ ಗೋಕಾಕ್) ನಗರಕ್ಕೆ ಮುತ್ತಿಗೆ ಹಾಕಿದ ವಿಷಯ ಅರಸೀಬೀದಿ ಶಾಸನದಿಂದ ಸ್ಪಷ್ಟವಾಗುತ್ತದೆ. ಇದೇ ಸಂದರ್ಭದಲ್ಲಿ ವಿಕ್ರಮಪುರದ (ಅರಸೀಬೀದಿ) ಗುಣದ ಬೆಡಂಗಿ ಜಿನಾಲಯಕ್ಕೆ ದಾನನೀಡಿದ ಉಲ್ಲೇಖಗಳು ಇವೆ. ಈಕೆಗೆ ರಣಭೈರವಿ ಎಂಬ ಬಿರುದಿತ್ತು. ಮುತ್ತಿಗೆಯ ಸಂದರ್ಭದಲ್ಲಿ ಗೋಕಾಗೆಯಲ್ಲಿದ್ದ ಗೋವಾ ಕದಂಬರ ಸಾಮಂತನನ್ನು ಸೋಲಿಸಿದ್ದಾಗಿ ತಿಳಿದುಬರುತ್ತದೆ. ಈಕೆಯ ಪತಿ ಹಾನಗಲ್ಲಿನ ಕದಂಬರ ದೊರೆ ಮಯೂರವರ್ಮ. ಅದೇ ರೀತಿಯಾಗಿ ಕಲ್ಲೊಳ್ಳಿಯ ಶಾಸನದಲ್ಲಿಯೂ ಇದೇ ರೀತಿಯಾದ ರಾಣಿಯರ ಹೆಸರು ಉಲ್ಲೇಖಗೊಂಡಿವೆ.[೧೨೮] ಇದರಲ್ಲಿ ರಟ್ಟ ದೊರೆಗಳ ರಾಣಿಯರ ಹಾಗೂ

ತಾಯಂದಿರ ಹೆಸರುಗಳಿವೆ. ಅವುಗಳೆಂದರೆ, ಲಕ್ಷ್ಮೀದೇವಿ (ಎರಡನೇ ಸೇನನ ಹೆಂಡತಿ), ಪದ್ಮಲಾದೇವಿ (ಕತ್ತಮ ಅಥವಾ ಎರಡನೇ ಕಾರ್ತವೀರ್ಯನ ಹೆಂಡತಿ), ಚಂದ್ರಿಕಾದೇವಿ (ಲಕ್ಷ್ಮೀದೇವನ ಹೆಂಡತಿ), ಏಚಲಾದೇವಿ (ನಾಲ್ಕನೇ ಕಾರ್ತವೀರ್ಯನ ರಾಣಿ ಈಕೆಗೆ ಚಕ್ರವರ್ತಿ ತನುಜೆ ಎಂದು ಹೇಳಲಾಗಿದೆ.) ಮೈಳಲಾದೇವಿ (ರಾಜರಸನ ಹೆಂಡತಿ).

**ಶಾಸನೋಕ್ತ ಅಧಿಕಾರಿ ಮತ್ತು ಮಂತ್ರಿಗಳು :**

ಪ್ರಾಚೀನ ಕಾಲದಿಂದಲೂ ಅರಸರು ತಮ್ಮ ಆಡಳಿತ ಯಶಸ್ವಿಯಾಗಲೆಂದು ಹಲವಾರು ಜನ ಅಧಿಕಾರಿ ಹಾಗೂ ಮಂತ್ರಿಗಳನ್ನು ನೇಮಿಸಿಕೊಳ್ಳುತ್ತಿದ್ದರು. ಇಡೀ ರಾಜ್ಯದ ಯಶಸ್ಸು ಈ ಅಧಿಕಾರಿ-ಮಂತ್ರಿವರ್ಗವನ್ನು ಅವಲಂಬಿಸಿತ್ತು. ಕೊಣ್ಣೂರು ಪರಿಸರದ ಶಾಸನಗಳಲ್ಲಿ ಕೆಲ ಅಧಿಕಾರಿಗಳ ಉಲ್ಲೇಖಗಳಿರುವುದನ್ನು ನೋಡಬಹುದಾಗಿದೆ. ಗಾವುಂಡ, ನಾಳ್ಗಾವುಂಡ, ಮಂಡಳೇಶ್ವರ, ಮಹಾಮಂಡಳೇಶ್ವರ, ಸಾಮಂತ, ಮಹಾಸಾಮಂತ ಹೀಗೆ ಹತ್ತು ಹಲವು ಅಧಿಕಾರಿಗಳು ಕಂಡುಬರುತ್ತಾರೆ. ಆರನೆಯ ವಿಕ್ರಮಾದಿತ್ಯನ ಕಾಲದ ಕೊಣ್ಣೂರಿನ ೧೦೮೭ರ ಶಾಸನದಲ್ಲಿ[೧೨೯] ಮಹಾಪ್ರಭುನಿಧಿಯಮ ಗಾವುಂಡ ಉಲ್ಲೇಖವಿದೆ. ಈತನು ನಿರ್ಮಿಸಿದ ಬಸದಿಗೆ ದಾನವನ್ನು ನೀಡಿದ ವಿಷಯವನ್ನು ಪ್ರಸ್ತಾಪಿಸಲಾಗಿದೆ. ವಿಕ್ರಮಾದಿತ್ಯನ ಕಾಲದ ಕುಂದರಗಿ ಶಾಸನದಲ್ಲಿ[೧೩೦] ಮಹಾಪ್ರಚಂಡ ದಂಡನಾಯಕ ಮಹೇಶ್ವರಯ್ಯರಸನು ಸೈನ್ಯದ ಮುಖ್ಯಸ್ಥನಾಗಿದ್ದನೆಂದು ಉಲ್ಲೇಖಗಳಿವೆ. ಆರನೆಯ ವಿಕ್ರಮಾದಿತ್ಯನ ಮಹಾಮಂಡಳೇಶ್ವರ ಪೆರ್ಮಾಡಿಯರಸನ ಉಲ್ಲೇಖಗಳೂ ಇಲ್ಲಿವೆ. ಈತ ವಿಕ್ರಮಾಧಿತ್ಯನ ಪ್ರೀತಿಯ ರಾಣಿ ಚಂದಲಾದೇವಿಯ ಪುತ್ರಿಯಾದ ನಾಗಲಾದೇವಿಯನ್ನು ವಿವಾಹವಾಗಿದ್ದ.[೧೩೧] ಗೋಕಾಕ್ ಜಲಪಾತದ ಬಳಿಯಿರುವ ಮಹಾಲಿಂಗೇಶ್ವರ ದೇವಾಲಯದಲ್ಲಿರುವ ಕಲಚೂರಿ ಚಕ್ರವರ್ತಿ ಭುಜಬಲಮಲ್ಲನ ಶಾಸನದಲ್ಲಿ[೧೩೨] ಪೆರ್ಗಡೆ ಧನ್ನುಗದೇವ ಹಾಗೂ ಮಹಾಮಂಡಳೇಶ್ವರ ಕತ್ತಮದೇವ ಹಾಗೂ ಸೋವಣದೇವ ಎಂಬ ಅಧಿಕಾರಿಗಳ ಉಲ್ಲೇಖಗಳನ್ನು ನೋಡಬಹುದಾಗಿದೆ.[೧೩೩] ಪೆರ್ಗಡೆ ಧನ್ನುಗದೇವನು ತಟೇಶ್ವರ ದೇವಾಲಯಕ್ಕೆ ಕೊಂಡನೂರು (ಇಂದಿನ ಕೊಣ್ಣೂರು) ಗ್ರಾಮವನ್ನು ದತ್ತಿಯಾಗಿ ನೀಡಿದ. ಕ್ರಿ.ಶ. ೧೨೪೬ರ ಮಮದಾಪುರ ಶಾಸನದಲ್ಲಿ[೧೩೪] ಚಾಮುಂಡನೆಂಬ ಪ್ರಸಿದ್ಧ ದಂಡನಾಯಕನ ಉಲ್ಲೇಖಗಳು ಬರುತ್ತವೆ. ಅಲ್ಲದೆ ಮಲ್ಲಿಶೆಟ್ಟಿ ಮಂತ್ರಿ, ಮೂಲಿಗ ಹೊಳ್ಳಿಗಾವುಂಡ ಎಂಬ ದಾಖಲೆಗಳು ನಿಯಂತ್ರಣಾಧಿಕಾರಿಗಳ ಹೆಸರುಗಳನ್ನು ತಿಳಿಸುತ್ತವೆ. ಕ್ರಿ.ಶ. ೧೦೮೭ರ ಕೊಣ್ಣೂರು ಶಾಸನದಲ್ಲಿ[೧೩೫] ಕಲಿಯಗಾವುಂಡ ಎಂಬ ಅಧಿಕಾರಿ ಹಾಗೂ ಮಹಾಪ್ರಧಾನ ಮಂಜುನಾಯಕನ ಉಲ್ಲೇಖಗಳನ್ನು ಇಲ್ಲಿರುವ ಇನ್ನೊಂದು ಶಾಸನದಲ್ಲಿ ಕಾಣಬಹುದಾಗಿದೆ.[೧೩೬]

**ಕೊಣ್ಣೂರು ಪರಿಸರದ ಆರ್ಥಿಕತೆ :**

ಪ್ರಸ್ತುತ ಅಧ್ಯಯನವು ಪುರಾತತ್ವದ ಹಿನ್ನೆಲೆಯನ್ನು ಕೇಂದ್ರೀಕರಿಸಿಕೊಂಡಿದ್ದರೂ ಸಂದರ್ಭೋಚಿತವಾಗಿ ಅಲ್ಲಿರುವ ಆಡಳಿತ, ಆರ್ಥಿಕ, ಸಮಾಜೋ-ಧಾರ್ಮಿಕ ಮಹತ್ವದ ವಿಚಾರಗಳನ್ನು ಈ ಪ್ರದೇಶದಲ್ಲಿ

ಸಿಕ್ಕಿರುವ ಶಾಸನ ಹಾಗೂ ಇತರ ದಾಖಲೆಗಳ ಹಿನ್ನೆಲೆಯಲ್ಲಿ ಸಂಕ್ಷಿಪ್ತವಾಗಿ ವಿವರಿಸುವ ಪ್ರಯತ್ನ ಮಾಡಲಾಗಿದೆ. ಕೊಣ್ಣೂರು ಪರಿಸರದಲ್ಲಿ ಘಟಪ್ರಭಾ ಹಾಗೂ ಅದರ ಉಪನದಿಗಳಾದ ಹಿರಣ್ಯಕೇಶಿ ಮತ್ತು ಮಾರ್ಕಂಡೇಯ ನದಿಗಳು ಹರಿಯುತ್ತಿರುವುದರಿಂದ ಸ್ವಾಭಾವಿಕವಾಗಿ ಈ ನಾಡು ಪ್ರಾಚೀನ ಕಾಲದಲ್ಲಿ ಆರ್ಥಿಕವಾಗಿ ಸಮೃದ್ಧವಾಗಿತ್ತೆನ್ನುವುದರಲ್ಲಿ ಎರಡು ಮಾತಿಲ್ಲ. ಕೃಷಿ, ವ್ಯಾಪಾರ ಹಾಗೂ ಸಣ್ಣ ಪ್ರಮಾಣದ ಕೈಗಾರಿಕೆಗಳು ಅಂದು ಜನರ ಜೀವನಾಧಾರವಾಗಿದ್ದವು. ನಮಗೆ ಲಭ್ಯವಾದ ಶಾಸನಗಳ ಆಧಾರದ ಮೇಲೆ ಅಲ್ಲಿಯ ಆರ್ಥಿಕತೆಯನ್ನು ಅರಿಯಬಹುದಾಗಿದೆ. ಕೃಷಿ ಪ್ರಾಚೀನ ಕಾಲದಿಂದಲೂ ಪ್ರಚಲಿತವಾಗಿರುವ ಮಾನವನ ಪ್ರಮುಖ ಮೂಲ ಉದ್ಯೋಗವಾಗಿದ್ದು ಜನರ ಆರ್ಥಿಕತೆಯಲ್ಲಿ ಪ್ರಮುಖ ಪಾತ್ರವನ್ನು ವಹಿಸಿತ್ತು. ಅಧಿಕಾರಿ ಮಂತ್ರಿ ಮತ್ತು ರಾಜರು, ಭೂಮಿಯನ್ನು ದೇವಾಲಯಗಳಿಗೆ ದಾನವಾಗಿ ನೀಡಿದ ದಾಖಲೆಗಳು ಸಿಗುತ್ತವೆ.

ಭೂಮಿಯನ್ನು ಬೇರೆ ಬೇರೆ ಮಾನ ಅಥವಾ ಅಳತೆಗಳಿಂದ ಮಾಪನ ಮಾಡಲಾಗುತ್ತಿತ್ತು. ಅವುಗಳಲ್ಲಿ ಕಂಬ, ಮತ್ತರು, ಗೇಣು, ನಿವರ್ತನ, ಕೋಲು, ಖಂಡುಗ ಹೀಗೆ ಹಲವಾರು ಅಳತೆಗಳಿದ್ದವು. ಕ್ರಿ.ಶ.೬-೭ನೇ ಶತಮಾನಕ್ಕೆ ಸೇರಿದ ಗೋಕಾಕ್ ತಾಮ್ರಪಟ ಶಾಸನದಲ್ಲಿ[೧೩೬] ೫೦ ನಿವರ್ತನ ಭೂಮಿಯನ್ನು ದಾನವಾಗಿ ನೀಡಿದ ಉಲ್ಲೇಖಗಳಿವೆ. ಅದೇ ರೀತಿಯಾಗಿ ಕಲೊಳ್ಳಿಯ ಶಾಸನದಲ್ಲಿ[೧೩೭] ೨೦೦೦ ಕಂಬ ಭೂಮಿಯನ್ನು ಹಾಗೂ ೩೦ ಕಂಬ ಹೂತೋಟವನ್ನು ದಾನ ನೀಡಿದ ವಿವರಗಳಿವೆ. ಕೊಣ್ಣೂರಿನ ಶಾಸನದಲ್ಲಿ[೧೩೮] ಮತ್ತರು ಭೂಮಿಯನ್ನು ದಾನ ನೀಡಿದ ಉಲ್ಲೇಖಗಳಿವೆ. ಮಾಲದಿನ್ನಿ ಶಾಸನದಲ್ಲಿ[೧೪೦] , ಖಂಡುಗ ಭೂಮಿಯನ್ನು ದಾನವಾಗ ನೀಡಿದ ಮಾಹಿತಿಗಳಿವೆ. ಈ ಖಂಡುಗ, ಕಂಬ, ಮತ್ತರು, ನಿವರ್ತನಗಳನ್ನು ಕುರಿತು ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಆರ್.ಶೇಷಾಶಾಸ್ತ್ರಿಯವರು ಒಂದು ಖಂಡುಗ ಎಂದರೆ ಧಾನ್ಯ ಅಳೆಯುವ ಗರಿಷ್ಠಮಾನ. ಒಂದು ಖಂಡುಗ ಭೂಮಿ ಎಂದರೆ ಒಂದು ಖಂಡುಗ ಧಾನ್ಯ ಬಿತ್ತಲು ಬೇಕಾಗುವಷ್ಟು ಭೂಮಿ ಎಂದಿದ್ದಾರೆ. ಅಲ್ತೇಕರ್, ಏಳು ಮತ್ತರ ಎಂದರೆ ಐದು ಎಕರೆ ಎಂದಿದ್ದಾರೆ. ಏಳು ಮತ್ತರ ೯೦೦ ಕಂಬ ಎಂದು ಕೆಲವರು ಹೇಳಿದರೆ, ಕೆಲವರು ಒಂದು ಮತ್ತರು ಎಂದರೆ ೨೦೦ ಕಂಬ ಎಂದಿದ್ದಾರೆ. ಕೊಣ್ಣೂರಿನ ಶಾಸನದ ಪ್ರಕಾರ[೧೪೧] ಸ್ಥಳೀಯ ಅಧಿಕಾರಿ ನಿಧಿಯಮಗಾವುಂಡ ಜೈನ ಬಸದಿಗೆ ಕುಂದಿಯ ಕೋಲಿನ ಅಳತೆಯ ಪ್ರಕಾರ ಎರಡು ಮತ್ತರು ಭೂಮಿಯನ್ನು ದಾನವಾಗಿ ನೀಡಿದ ಮಾಹಿತಿಗಳಿವೆ. ಕುಂದಿಯ ಕೋಲ್ ಅಂದು ಕೂಹಂಡಿ ೩೦೦೦ ನಾಡಿನಲ್ಲಿ ಪ್ರಮುಖವಾದ ಭೂಮಾಪನವಾಗಿತ್ತು.

ಅಂದು ಕೂಹಂಡಿನಾಡಿನಲ್ಲಿ ಭೂಮಿಯನ್ನು ಅಳೆಯಲು ಹಲವಾರು ಕೋಲು ಮಾಪನಗಳನ್ನು ಬಳಸಲಾಗುತ್ತಿತ್ತು.[೧೪೨] ಅವುಗಳೆಂದರೆ

೧. ಬಡ್ಲಿಯ ಬಾಲಕೃಷ್ಣ ದೇವರ ಕೋಲ್ (ಬಡ್ಲಿ)

೨. ಮಾಣಿಕೇಶ್ವರ ಕೋಲ್ (ನೇಸರಿ)

೩. ಕಂಗೇಶ್ವರ ಕೋಲ್ (ಅರ್ಜುನವಾಡ)

೪. ಅರ್ಧನಾರೀಶ್ವರ ದೇವರ ಕೈಯಂ (ಹಡ್ಲಿ)



೫. ವೇಣುಗ್ರಾಮದ ಕೋಲ್ (ವೇಣುಗ್ರಾಮ)

೬. ಪಿರಿಯ ಕೋಲ್ (ಸುಗಂಧಿವರ್ತಿ)

ಬಹುಶಃ ಕೊಣ್ಣೂರು ಪರಿಸರದಲ್ಲಿ ಈ ಅಳತೆಗೋಲುಗಳು ಬಳಕೆಯಲ್ಲಿದ್ದಿರಬಹುದು. ಕಲ್ಲೊಳ್ಳಿಯ ಶಾಸನದಲ್ಲಿ[೧೪೩] ಹಸ್ತ-ನಲ್ವತ್ತು, ಹಸ್ತ-ಐವತ್ತು, ಹಸ್ತ-ಇಪ್ಪತ್ತೆರಡು ಎಂಬ ಹಸ್ತದ ಉಲ್ಲೇಖಗಳಿವೆ. ಈ ಹಸ್ತದ ಅಳತೆ ರಾಜನ ಹಸ್ತದ ಅಳತೆಗೆ ಸಮಾನವಾಗಿತ್ತೆಂದು ತಿಳಿದುಬರುತ್ತದೆ. ಮಮದಾಪುರದ ಕ್ರಿ.ಶ.೧೨೪೬ರ ಶಾಸನದಲ್ಲಿ[೧೪೪] ರಾಜಹಸ್ತ, ಹಸ್ತ ೨೫, ಹನ್ನೆರಡು ಮತ್ತರು ಗದ್ದೆ, ಕೆಯಕಂಬ ೧೦೦, ಕಂಬ ೩೦೦ ಎಂಬ ವಿವಿಧ ಭೂಮಾಪನಗಳ ಉಲ್ಲೇಖಗಳಿವೆ.

ಕೊಣ್ಣೂರು ಪರಿಸರದಲ್ಲಿ ಸಾಕಷ್ಟು ಪ್ರಮಾಣದಲ್ಲಿ ಹೂತೋಟಗಳಿರುವುದು ಶಾಸನಗಳಿಂದ ತಿಳಿದುಬರುತ್ತದೆ. ಇವುಗಳಿಗೆ ದೇವಾಲಯದ ಪೂಜೆ ಹಾಗೂ ಜೀರ್ಣೋದ್ಧಾರಕ್ಕೆ ದಾನ ನೀಡುವ ರೂಢಿಯಿತ್ತು. ಕೊಣ್ಣೂರಿನ ಶಾಸನ[೧೪೫]ದಲ್ಲಿ ಜೈನ ದೇವಾಲಯಕ್ಕೆ ಒಂದು ಹೂತೋಟವನ್ನು ದಾನನೀಡಿದ ಉಲ್ಲೇಖಗಳಿವೆ. ಅದೇ ರೀತಿಯಾಗಿ ಕಲ್ಲೊಳ್ಳಿಯ ಶಾಸನದಲ್ಲಿ[೧೪೬] ೩೦ ಕಂಬ ಹೂದೋಟಗಳನ್ನು ದಾನ ನೀಡಿದ ದಾಖಲೆಗಳಿವೆ.



ಈ ಪ್ರದೇಶದಲ್ಲಿ ವ್ಯಾಪಾರ ಹಾಗೂ ವಾಣಿಜ್ಯ ಚಟುವಟಿಕೆಗಳು ಅಲ್ಲಿನ ಸ್ಥಳೀಯ ವ್ಯಾಪಾರಿ ಸಂಘ ಸಂಸ್ಥೆಗಳ ಮೂಲಕ ನಡೆಯುತ್ತಿತ್ತು. ಇಲ್ಲಿನ ವ್ಯಾಪಾರಿವರ್ಗ ಪ್ರಬಲವಾಗಿತ್ತೆಂದು ಇಲ್ಲಿನ ಶಾಸನಗಳಿಂದ ತಿಳಿದುಬರುವ ವಿಷಯ. ಪ್ರಾಚೀನ ಕಾಲದಿಂದಲೂ ಪ್ರಸಿದ್ಧಿಯಾದ ಐಯ್ಯಾವೊಳೆ ಐನೂರ್ವರ್, ಮುಮ್ಮರಿದಂಡ, ತೆಲ್ಲಿಗ, ನಾನಾದೇಶಿಗಳ್, ಎಂಟು ಹಿಟ್ಟು ಎಂಬ ವೃತ್ತಿಕಾರರ ಸಂಘಟನೆಗಳು ಪ್ರಸಿದ್ಧವಾಗಿದ್ದು, ಅವು ಕೊಣ್ಣೂರಿನ ಪರಿಸರದ ಶಾಸನಗಳಲ್ಲಿ ಉಲ್ಲೇಖಿಸಲ್ಪಟ್ಟಿವೆ. ೧೨೪೬ರ ಮಮದಾಪುರದ ಶಾಸನದಲ್ಲಿ[೧೪೭] ಅಂದು ಸುಪ್ರಸಿದ್ಧವಾದ ಬಣಂಜುಗಳ ಕೇಂದ್ರವಾಗಿತ್ತೆಂದು ತಿಳಿದುಬರುತ್ತದೆ. ಈ ಶಾಸನದಲ್ಲಿ 'ಮುಮ್ಮರಿದಂಡ' ವೃತ್ತಿಕಾರರರ ಸಂಘ ಹಾಗೂ ಶ್ರೀಮದ್ ಐಯ್ಯಾವೊಳೆ ಐನೂರ್ವರ ಸ್ವಾಮಿಗಳ ಎಂಬ ಉಲ್ಲೇಖಗಳಿವೆ. ಶಾಸನದಲ್ಲಿ ಉಲ್ಲೇಖಿಸಿದ ಮಲ್ಲಿಶೆಟ್ಟಿ, ಆದಿಶೆಟ್ಟಿ, ಕಲಿದೇವಶೆಟ್ಟಿ ಇವರು ವರ್ತಕರ ಗುಂಪಿಗೆ ಸೇರಿದವರೆಂಬುದಾಗಿ ತಿಳಿದುಬರುತ್ತದೆ. ಇದೇ ಶಾಸನದಲ್ಲಿ 'ವಜ್ರಬೈಸಣಿಗೆ' ಎಂಬ ಹೆಸರಿನ ಉಲ್ಲೇಖವಿದ್ದು, ವರ್ತಕರು ವಿಶೇಷ ಸಂದರ್ಭದಲ್ಲಿ ಸಾಮೂಹಿಕವಾಗಿ ಕುಳಿತುಕೊಳ್ಳುವ ಆಸನ. ಅದು ವಜ್ರ, ರತ್ನ ಖಚಿತವಾದದ್ದು. ಬೈಸಣಿಗೆ ಪ್ರತಿನಿತ್ಯ ಕುಳಿತುಕೊಳ್ಳುವ ಆಸನ ಎನ್ನಬಹುದು.[೧೪೮] ಕುರುಬೆಟ್ಟದ ಚಾಮುಂಡರಾಜ ಪ್ರಸಿದ್ಧ ವ್ಯಾಪಾರಸ್ಥನಾಗಿದ್ದ.[೧೪೯] ಗೋಕಾಕ್ ಜಲಪಾತದ ಬಳಿಯಿರುವ ಮಹಾಲಿಂಗೇಶ್ವರ ದೇವಾಲಯದಲ್ಲಿರುವ ಶಾಸನದಲ್ಲಿ[೧೫೦] ಎಂಟು

ಹಿಟ್ಟು ಎಂಬ ವೃತ್ತಿ ಸಂಘದ ಉಲ್ಲೇಖಗಳಿವೆ. ಇಲ್ಲಿ ಹಿಟ್ಟು ಎಂದರೆ ಜೀವನ ಅಥವಾ ಕಸುಬು ಎಂದರ್ಥ. ಎಂಟು ಹಿಟ್ಟು ಎಂದರೆ ಎಂಟು ಕಸುಬುಗಳ ಜನರ ಒಂದು ಸಂಘ ಎಂದು ಕರೆಯಬಹುದು.[೧೫೧] ಕ್ರಿ.ಶ. ೧೨೦೪ರ ಕಲ್ಲೊಳ್ಳಿಯ ಶಾಸನದಲ್ಲಿ[೧೫೨] ಅಂಗಡಿ ಮತ್ತು ಸಂತೆಗಳ ಉಲ್ಲೇಖಗಳಿವೆ. ಇದರಿಂದ ಈ ಭಾಗದಲ್ಲಿ ಸಂತೆ ಮತ್ತು ಅಂಗಡಿಗಳ ಮೂಲಕ ವ್ಯಾಪಾರ ವಹಿವಾಟು ನಡೆಯುತ್ತೆಂಬುದು ತಿಳಿದುಬರುತ್ತದೆ. ಇದೇ ಶಾಸನದಲ್ಲಿ ಎಲೆ, ಅಡಿಕೆ, ಹೂವು ಮುಂತಾದ ವಾಣಿಜ್ಯ ಬೆಳೆಗಳ ಉಲ್ಲೇಖಗಳಿವೆ. ಕ್ರಿ.ಶ. ೧೨೪೬ರ ಮಮದಾಪುರದ ಶಾಸನದಲ್ಲಿ[೧೫೩] ಮಾಣಿಕ್ಯದ ಉಲ್ಲೇಖವಿರುವುದರಿಂದ ಈ ಪ್ರದೇಶದಲ್ಲಿ ರತ್ನ, ಮಾಣಿಕ್ಯ ಇತ್ಯಾದಿ ಅಮೂಲ್ಯ ವಸ್ತುಗಳ ವಹಿವಾಟು ನಡೆಯುತ್ತಿತ್ತೆಂದು ತಿಳಿಯಬಹುದು. ಕಲ್ಲೊಳ್ಳಿಯ ಶಾಸನದಲ್ಲಿ[೧೫೪] ಕೆಲವು ತೆರಿಗೆಗಳನ್ನು ಕುರಿತು ಉಲ್ಲೇಖಗಳಿವೆ. ಊರೊಳಗೆ ಬರುವ ಎಲ್ಲಾ ಧಾನ್ಯಗಳ ಮೇಲೆ ಇದ್ದ ತೆರಿಗೆಗಳು ಹೀಗಿವೆ.

ಹೇರಿಗೆ - ಒಂದು ಮಾನ

ಬಂಡಿಗೆ - ಎರಡು ಬಳ್ಳ

ಅಡಿಕೆ ಹಸರಕ್ಕೆ - ಐದು ಅಡಿಕೆ

ಒಂದು ಹೇರು ಎಲೆಗೆ - ನೂರು ಎಲೆ

ಒಂದು ಹೆಡಿಗೆ ಎಲೆಗೆ - ಐವತ್ತು ಎಲೆ

ಒಂದು ಗಾಣಕ್ಕೆ - ಸೊಲ್ಲಿಗೆ ಎಣ್ಣೆ

ಕುಂಬಾರನ ಮಡಿಕೆಯ ಮೇಲೆಯೂ ತೆರಿಗೆಯನ್ನು ವಿಧಿಸಲಾಗುತ್ತಿತ್ತು. ಒಂದು ಕಂಪೆ ಮಡಿಕೆಗಳಿಗೆ ಒಂದು ಮಡಿಕೆ ಕೊಡಬೇಕಿತ್ತು. ಕ್ರಿ.ಶ. ೧೨೦೪ರ ಕಲ್ಲೊಳ್ಳಿಯ ಶಾಸನದ[೧೫೫] ಪ್ರಕಾರ ಅಂದು ಹೇರು, ಮಣ, ಬಳ್ಳ, ಹೊತ್ತಲ, ಸೊಲ್ಲಿಗೆ (ಸೌಂಟಿಗೆ)ಗಳನ್ನು ಧಾನ್ಯ ಮತ್ತು ಎಣ್ಣೆ ಮುಂತಾದವುಗಳನ್ನು ಅಳೆಯಲು ಬಳಸಲಾಗುತ್ತಿತ್ತು. ಈ ಭಾಗದ ಶಾಸನಗಳಲ್ಲಿ ತೈಲೋದ್ಯಮ, ಗಾಣಗಳ ಮತ್ತು ಅಂಗಡಿಗಳ ಉಲ್ಲೇಖಗಳಿವೆ. ಕೊಣ್ಣೂರಿನ ಶಾಸನದಲ್ಲಿ ಗದ್ಯಾನ, ಪೊನ್ನು ಇತ್ಯಾದಿ ನಾಣ್ಯಗಳ ಉಲ್ಲೇಖಗಳು ಸಹ ಸಿಗುತ್ತವೆ.

**ಅಡಿಟಿಪ್ಪಣಿಗಳು**

೧. ಎಆರ್ಐಇ, ೧೯೫೨-೫೩, ಅಪೆಂಡಿಕ್ಸ್ ಬಿ, ನಂ,೫೨-೫೩, ದ ಡಿಸ್ಕ್ರಿಪ್ಟೀವ್ ಲಿಸ್ಟ್ ಆಫ್ ಸ್ಟೋನ್ ಅಂಡ್ ಕಾಪರ್ ಪ್ಲೇಟ್ ಇನ್ಸ್ಕ್ರಿಪ್‌ಶನ್ಸ್, ಕೆಆರ್ಐ, ೧೯೪೧-೪೨, ನಂ.೬೦

೨. ಕರ್ನಾಟಕದ ಗ್ರಾಮಸೂಚಿ, ಪುಟ ೧೬೬

೩. ಎಆರ್ಐಇ, ೧೯೫೨-೫೩, ಅಪೆಂಡಿಕ್ಸ್ ಬಿ, ನಂ.೫೨

೪. ಅದೇ

೫. ಐಎ, ಪುಟ ೨೭೮

೬. ಹಿರೇಮಠ ಆರ್.ಸಿ ಮತ್ತು ಕಲಬುರ್ಗಿ ಎಂ.ಎಂ, **ಕನ್ನಡ ಶಾಸನ ಸಂಪದ,** ಪುಟ ೧೩೬

೭. **ಕೂಹೂಂಡಿನಾಡು,** ಪಾಟೀಲ್ ಎಸ್.ಬಿ, ಪು.೧೭

೮. ಪಾಟೀಲ್ ಎಸ್.ಬಿ, **ಕೂಹೂಂಡಿ ನಾಡು,** ಪುಟ ೧೭

೯. ಹಿರೇಮಠ ಆರ್.ಸಿ ಮತ್ತು ಕಲಬುರ್ಗಿ ಎಂ.ಎಂ, **ಕನ್ನಡ ಶಾಸನ ಸಂಪದ,** ಪುಟ ೧೩೬

೧೦. ಪಾಟೀಲ್ ಎಸ್.ಬಿ, **ಕೂಹಂಡಿನಾಡು,** ಪುಟ ೧೭

೧೧. ಸೂರ್ಯನಾಥ ಕಾಮತ್, **ಕರ್ನಾಟಕ ಸಂಕ್ಷಿಪ್ತ ಚರಿತ್ರೆ,** ಪುಟ ೧೭

೧೨. ಷಡಕ್ಷರಯ್ಯ ಆರ್.ಎಂ, **ಬೆಳಗಾವಿ ಬೆಳಕು,** ಪುಟ ೪

೧೩. ಕ್ಷೇತ್ರಕಾರ್ಯ ಸಂದರ್ಭದಲ್ಲಿ ದೊರೆತ ಮಾಹಿತಿ

೧೪. ನಾವಲಗಿ ಸಿ.ಕೆ, **ಜೈನ ಕ್ಷೇತ್ರಗಳ ಐತಿಹ್ಯ,** ಪುಟ ೮೭-೮೮

೧೫. **ಎಆರ್ಐಇ,** ೧೯೫೨-೫೩, ಅಪೆಂಡಿಕ್ಸ್ ಬಿ, ನಂ.೫೪-೫೫

೧೬. ಕೆಐ, V, ನಂ.೨೧, ಐ.ಎ, XIV, ಪುಟ ೧೪

೧೭. **ಕರ್ನಾಟಕ ಚರಿತ್ರೆ,** ಸಂಖ್ಯೆ ೧, ಪುಟ ೩೦೫-೩೪೯

೧೮. **ಕರ್ನಾಟಕ ಚರಿತ್ರೆ,** ಸಂಖ್ಯೆ ೧, ಪುಟ ೩೭೨

೧೯. ದೇಸಾಯಿ ಪಿ.ಬಿ, **ದ ಹಿಸ್ಟರಿ ಆಫ್ ಕರ್ನಾಟಕ,** ಪುಟ ೬೫

೨೦. ಐಎ, ಸಂ XXI, ಪುಟ ೯೩, ಕಾರ್ಪಸ್ ಆಫ್ ಕದಂಬ ಇನ್ಸ್ಕ್ರಿಪ್ಷನ್, ಸಂಖ್ಯೆ ೧, ಪುಟ ೧೭೪-೧೭೫

೨೧. ದೇಸಾಯಿ ಪಿ.ಬಿ, (ಸಂ). ಎ **ಹಿಸ್ಟರಿ ಆಫ್ ಕರ್ನಾಟಕ,** ಪುಟ ೬೦

೨೨. ಅದೇ, ಪುಟ ೬೦

೨೩. ಕ್ಯಾಂಬೆಲ್, **ಬೆಳಗಾವಿ ಗೆಜೆಟಿಯರ್,** ಪುಟ ೮೨

೨೪. ದೇಸಾಯಿ ಪಿ.ಬಿ, **ಹೂಲಿಪ್ಲೇಟ್ ಆಫ್ ಮಂಗಳರಾಜ,** ಇ.ಐ, xxxviii, ಪುಟ ೨೮೫-೨೮೮, ದ ಜೆ.ಕೆ.ಯು, V, ಪುಟ ೧೭೫

೨೫. **ಎಆರ್ಐಇ,** ೧೯೪೦-೪೧, ಅಪೆಂಡಿಕ್ಸ್ E, ನಂ.೮೮

೨೬. ಇಐ, ಸಂ, XXI, ಪುಟ ೨೮೯-೯೨

೨೭. ಬೆಳಗಾವಿ ಬೆಳಕು, ಪುಟ ೧೦

೨೮. ಅದೇ, ಪುಟ ೧೧, ಇಐ, XXXVIII, ನಂ.೩೪

೨೯. ಇಐ, XXI, ಪುಟ ೨೮೯-೨೯೨

೩೦. ಬೆಳಗಾವಿ ಬೆಳಕು, ಪುಟ ೧೧, ಇತಿಹಾಸ ದರ್ಶನ ೧೧, ಪುಟ ೨೪೯

೩೧. ಇಐ, XXI, ಪುಟ ೨೯೧

೩೨. ಅದೇ, ಪುಟ ೨೯೧

೩೩. ಸೂರ್ಯನಾಥ ಕಾಮತ್, ಕರ್ನಾಟಕದ ಸಂಕ್ಷಿಪ್ತ ಇತಿಹಾಸ, ಪುಟ ೮೭

೩೪. ಬಸವರಾಜ ಕೆ.ಆರ್, ಬೆಳಗಾವಿ ಜಿಲ್ಲೆಯ ರಟ್ಟರು, ಪುಟ ೮೭

೩೫. ಕೆಐ, V, ನಂ.೬

೩೬. ಎಆರ್‌ಐಇ, ೧೯೫೨-೫೩, ಅಪೆಂಡಿಕ್ಸ್ ಬಿ, ನಂ.೫೪

೩೭. ಜೆಬಿಬಿಆರ್‌ಎಎಸ್, ನಂ.X, ಪುಟ ೨೯೩-೯೪

೩೮. ಪಾಟೀಲ್ ಎಸ್.ಬಿ, ಬೆಳಗಾವಿ ಬೆಳಕು, ಪುಟ ೭೮

೩೯. ಎಆರ್‌ಐಇ, ೧೯೫೨-೫೩, ಅಪೆಂಡಿಕ್ಸ್ ಬಿ, ನಂ.೫೫

೪೦. ಕೆಐ, VI, ಪುಟ ೨೧

೪೧. ಪಾಂಡುರಂಗ ದೇಸಾಯಿ, ಕರ್ನಾಟಕದ ಕಲಚೂರಿಗಳು, ಪುಟ ೩೭-೪೦

೪೨. ಇಐ, ಸಂ XVII, ಪುಟ ೧೨೧, ಶಾಸನ ಸಂಪುಟ ೯, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ನಂ.೧೧೦, ಕೆ.ಐ v, ನಂ.೬

೪೩. ಹಿರೇಮಠ ಆರ್.ಸಿ ಮತ್ತು ಕಲಬುರ್ಗಿ ಎಂ.ಎಂ, ಕನ್ನಡ ಶಾಸನ ಸಂಪುಟ, ಪುಟ ೧೩೪

೪೪. ಅದೇ, ಪುಟ ೧೩೪

೪೫. ಫ್ಲೀಟ್. ಜೆ. ಎಫ್, ಡೈನಾಸಿಟೀಸ್ ಆಫ್ ಕೆನರೀಸ್ ಡಿಸ್ಟ್ರಿಕ್ಟ್, ಪುಟ ೪೩೫-೩೯

೪೬. ಇಐ, XXXVIII, ಪುಟ ೧೦

೪೭. ಅದೇ, ಪುಟ ೧೯

೪೮. ಪಾಟೀಲ್ ಎಸ್.ಬಿ. ಬೆಳಗಾವಿ ರಟ್ಟರು, ಪುಟ ೭೪

೪೯. ಇಐ, ಪುಟ ೨೭೮-೭೯

೫೦. ಹಿರೇಮಠ ಆರ್.ಸಿ ಮತ್ತು ಕಲಬುರ್ಗಿ ಎಂ.ಎಂ., ಕನ್ನಡ ಶಾಸನ ಸಂಪದ, ಪುಟ ೧೩೬

೫೧. ಪಾಟೀಲ್ ಎಸ್.ಬಿ, ಬೆಳಗಾವಿ ರಟ್ಟರು, ಪುಟ ೭೬

೫೨. ಎಆರ್‌ಐಇ, ೧೯೫೨-೫೩, ಅಪೆಂಡಿಕ್ಸ್ ಬಿ, ಸಂಖ್ಯೆ ೫೨

೫೩. ಐಎ, XIV, ಪುಟ ೧೪-೨೬, ಕೆಆರ್‌ಐ, ೨೩, ೧೯೪೪-೪೮

೫೪. ಬಿಕೆಐ, ೯೧, ೧೯೨೮-೨೯, ಶಾಸನ ಸಂಪುಟ ೯

೫೫. ಐಎ. XVIII, ಪು.೩೧೩

೫೬. ಕ್ಯಾಂಬೆಲ್, ಬೆಳಗಾವಿ ಗೆಜೆಟೀರಿಯರ್, ಪುಟ ೩೫೬

೫೭. ಫ್ಲೀಟ್ ಜೆ.ಎಫ್, ಡೈನಾಸಿಟೀಸ್ ಆಫ್ ಕೆನರೀಸ್ ಡಿಸ್ಟ್ರಿಕ್ಟ್, ಪುಟ ೫೫೨

೫೮. ಅದೇ, ಪುಟ ೫೫೧

೫೯. ಜೆಬಿಬಿಆರ್‌ಎಸ್, X, ೨೦೪

೬೦ ಫ್ಲೀಟ್, ಡೈನಾಸಿಟೀಸ್ ಆಫ್ ಕೆನರೀಸ್ ಡಿಸ್ಟ್ರಿಕ್ಟ್, ಪು.೫೫೧

೬೧. ಪಾಟೀಲ್ ಎಸ್.ಬಿ, ಬೆಳಗಾವಿಯ ರಟ್ಟರು, ಪುಟ ೭೦೭

೬೨. ಅದೇ, ಪುಟ ೭೭

೬೩. ಪಾಟೀಲ್ ಎಸ್.ಬಿ, ಬೆಳಗಾವಿ ಬೆಳಕು, ಪುಟ ೭೭

೬೪. ಐಎ. XIX, ಪುಟ ೧೬೧, ಶಾಸನ ಸಂಪುಟ ೯, ಪುಟ ೭೮, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೬೫. ಪಾಟೀಲ್ ಎಸ್.ಬಿ. ಬೆಳಗಾವಿ ಬೆಳಕು, ಪು.೭೮

೬೬. ಸೌಇಇ, XX, ಸಂಖ್ಯೆ ೭೬

೬೭. ಜೆಬಿಬಿಆರ್‌ಎಎಸ್, X, ಪು.೨೯೭-೯೮

೬೮. ಜೆಬಿಬಿಆರ್‌ಎಎಸ್, X, ೨೧೩, (ಸೌಂದತ್ತಿ ಶಾಸನ)

೬೯. ಸೌಇಇ, XX, ೬೧, ಜೆಬಿಬಿಆರ್‌ಎಎಸ್, X, ಪುಟ ೨೯೩-೯೪

೭೦. ಫ್ಲೀಟ್, **ಡೈನಾಸ್ಟೀಸ್ ಆಫ್ ಕೆನರೀಸ್ ಡಿಸ್ಟ್ರಿಕ್ಟ್**, ಪುಟ ೫೫೪

೭೧. **ಎಆರ್‌ಐಇ**, ೧೯೫೨-೫೩, **ಅಪೆಂಡಿಕ್ಸ್** ಬಿ, ೫೧

೭೨. ಪಾಟೀಲ್ ಎಸ್.ಬಿ, **ಬೆಳಗಾವಿ ಬೆಳಕು**, ಪುಟ ೭೯

೭೩. **ಕರ್ನಾಟಕ ಭಾರತಿ**, ೬/೩, ಪುಟ ೪೩-೫೪

೭೪. ಪಾಟೀಲ್ ಎಸ್.ಬಿ, **ಕೂಹೂಂಡಿ ನಾಡು**, ಪುಟ ೧೪-೧೫

೭೫. **ಜೆಬಿಬಿಆರ್‌ಎಎಸ್**, ಪುಟ ೨೬೦

೭೬. **ಕರ್ನಾಟಕ ಭಾರತಿ**, ೬/೩, ಪುಟ ೪೩-೫೪

೭೭. **ಎಆರ್‌ಐಇ**, ೧೯೫೨-೫೩, **ಅಪೆಂಡಿಕ್ಸ್** ಬಿ, ೫೪, **ಜೆಬಿಬಿಆರ್‌ಎಎಸ್**, X, ೨೮೭

೭೮. **ಜೆಬಿಬಿಆರ್‌ಎಎಸ್**, X, ಪುಟ ೨೮೭

೮೦. **ಜೆಬಿಬಿಆರ್‌ಎಎಸ್**, X, ಪುಟ ೧೮೧

೮೧. **ಜೆಬಿಬಿಆರ್‌ಎಎಸ್**, X, ಪುಟ ೨೮೭

೮೨. ಷಡಕ್ಷರಯ್ಯ ಆರ್.ಎಂ, **ಬೆಳಗಾವಿ ಬೆಳಕು**, ಪುಟ ೧೮

೮೩. **ಎಆರ್‌ಐಇ**, ೧೯೫೨-೫೩, **ಅಪೆಂಡಿಕ್ಸ್** ಬಿ, ಪುಟ ೫೨-೫೪

೮೪. ಅದೆ, ಪುಟ ೫೨

೮೫. **ಎಆರ್‌ಐಇ**, ೧೯೫೨-೫೩, **ಅಪೆಂಡಿಕ್ಸ್** ಬಿ, ಪುಟ ೫೩

೮೬. **ಐಇ**, XIX, ಪುಟ ೧೯-೩೦

೮೭. ಓರೇಮಠ ಆರ್.ಸಿ ಮತ್ತು ಕಲಬುರ್ಗಿ ಎಂ.ಎಂ., **ಕನ್ನಡ ಶಾಸನ ಸಂಪದ**, ಪುಟ ೧೩೦-೧೩೧

೮೮. ಪ್ರಾಚೀನಾಂದ್ರ ಚಾರಿತ್ರಿಕ ಭೂಗೋಳಮು, ಪುಟ ೩೪-೩೫, ಆರನೆಯ ವಿಕ್ರಮಾದಿತ್ಯನ ಒಂದು ಅಧ್ಯಯನ, ಪುಟ ೮೮

೮೯. **ಸೌಇಇ**, IX(i), ೧೬೯, ೧೧೦೪, ಕುರವತ್ತಿ, ಹರಪನಹಳ್ಳಿ, ಬಳ್ಳಾರಿ

೯೦. **ಕನ್ನಡ ಶಾಸನ ಸಂಪದ**, ಪು.೧೩೫

೯೧. ಐಎ, XXIX, ಪುಟ ೨೮೦, ಕೆಐ, ಸಂ. VI, ೩

೯೨. ಓರೇಮಠ ಆರ್.ಸಿ. ಮತ್ತು ಕಲಬುರ್ಗಿ ಎಂ.ಎಂ, **ಕನ್ನಡ ಶಾಸನ ಸಂಪದ**, ಪುಟ ೧೩೬

೯೩. ಪಾಟೀಲ್ ಎಸ್.ಬಿ, **ಬೆಳಗಾವಿ ಬೆಳಕು,** ಪುಟ ೭೬

೯೪. ಐಎ, XIV, ಪುಟ ೧೪-೨೬, **ಶಾಸನ ಸಂಪುಟ ೯,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ ೮೧

೯೫. **ಕರ್ನಾಟಕ ಭಾರತಿ,** ೬/೩, ಪುಟ ೪೩೫೪, **ಎಪಿಗ್ರಾಫಿಯ ಇಂಡಿಕ,** XIX, ಪುಟ ೧೨೧

೯೬. ಐಎ, ಪುಟ ೨೭೮-೨೮೦

೯೭. **ಎಆರ್‌ಐಇ,** ೧೯೫೨-೫೩, ಅಪೆಂಡಿಕ್ಸ್ ಬಿ, ನಂ.೫೨

೯೮. **ಇಐ,** XIII, ನಂ.೨೮

೯೯. ಆರ್.ಸಿ.ಹಿರೇಮಠ ಮತ್ತು ಎಂ.ಎಂ.ಕಲಬುರ್ಗಿ, **ಕನ್ನಡ ಶಾಸನ ಸಂಪದ,** ಪುಟ ೧೩೬

೧೦೦. ಅದೆ, ಪುಟ ೧೩೬

೧೦೧. ಅದೆ, ಪುಟ ೧೩೬

೧೦೨. ಐಎ, XIX, ಪುಟ ೨೪೨-೪೩, **ಕೆರೂರು ಶಾಸನ,** ಚಿಕ್ಕೋಡಿ ತಾಲೂಕು

೧೦೩. ಆರ್.ಸಿ.ಹಿರೇಮಠ ಮತ್ತು ಎಂ.ಎಂ.ಕಲಬುರ್ಗಿ, **ಕನ್ನಡ ಶಾಸನ ಸಂಪದ,** ಪುಟ ೧೩೬-೧೪೦

೧೦೪. **ಜೆಬಿಬಿಆರ್‌ಎಎಸ್,** X, ಪುಟ ೨೨೦

೧೦೫. ಅದೇ, ಪುಟ ೮೧

೧೦೬. ಆರ್.ಸಿ.ಹಿರೇಮಠ ಮತ್ತು ಎಂ.ಎಂ.ಕಲಬುರ್ಗಿ, **ಕನ್ನಡ ಶಾಸನ ಸಂಪದ,** ಪುಟ ೧೩೬

೧೦೭. ಐಎ, XXIX, ಪುಟ ೨೭೦-೨೮೦

೧೦೮. ಐಎ, XXIX, ಪುಟ ೨೭೬-೨೮೦

೧೦೯. **ಇಐ,** XIII, **ಕರ್ನಾಟಕ ಭಾರತಿ,** ೬/೩, ಪುಟ ೪೫-೫೪

೧೧೦. **ಎಆರ್‌ಐಇ,** ೧೯೫೨-೫೩, ಅಪೆಂಡಿಕ್ಸ್ ಬಿ, ನಂ.೫೨

೧೧೧. **ಕೆಐ,** VI, ನಂ.೨೧

೧೧೨. **ಎಆರ್‌ಐಇ,** ೧೯೫೨-೫೩, ಅಪೆಂಡಿಕ್ಸ್ ಬಿ, ನಂ.೫೨

೧೧೩. **ಸಮರೈಸ್ ಆಫ್ ಇನ್‌ಸ್ಕ್ರಿಪ್ಷನ್,** ೧೯೪೩-೪೪, ೧೯೪೯-೫೦, ನಂ.೧೭

೧೧೪. ಐಎ, XXI, ಪುಟ ೯೩

೧೧೫. **ಇಐ**, XXI, ಪುಟ ೨೮೯-೯೨

೧೧೬. **ಕೆಐ**, VI, ನಂ.೬

೧೧೭. **ಎಆರ್‌ಐಇ**, ೧೯೫೨-೫೩, ಅಪೆಂಡಿಕ್ಸ್ ಬಿ, ನಂ.೫೪

೧೧೮. **ಕರ್ನಾಟಕ ಭಾರತಿ**, ೬/೩, **ಜೆಬಿಬಿಆರ್‌ಎಎಸ್**, X, ಪುಟ ೨೮೭, **ಶ್ರೀ ಪಾರ್ಶ್ವನಾಥ ಪುರಾಣಂ**, ಪುಟ ೬-೧೨

೧೧೯. **ಜೆಬಿಬಿಆರ್‌ಎಎಸ್**, X, ಪು.೨೮೭, **ಎಆರ್‌ಐಇ**, ೧೯೫೨-೫೩, ಅಪೆಂಡಿಕ್ಸ್ ಬಿ, ನಂ.೫೨

೧೨೦. **ಎಆರ್‌ಐಇ**, ೧೯೫೨-೫೩, ಅಪೆಂಡಿಕ್ಸ್ ಬಿ, ನಂ.೫೪

೧೨೧. **ಜೆಬಿಬಿಆರ್‌ಎಎಸ್**, X, ಪುಟ ೧೮೧, **ಕೆಐ**, VI, ನಂ.೬

೧೨೨. **ಕರ್ನಾಟಕ ಭಾರತಿ**, ೬/೩, ಪುಟ ೪೩-೫೪

೧೨೩. **ಎಆರ್‌ಐಇ**, ೧೯೫೨-೫೩, ಅಪೆಂಡಿಕ್ಸ್ ಬಿ, ನಂ.೫೨

೧೨೪. ಅದೇ, ಪುಟ ೫೪

೧೨೫. **ಇಐ**, XIX, ಪುಟ ೨೧-೩೦

೧೨೬. **ಇಐ**, XVII, ಪುಟ ೧೨೧

೧೨೭. ಆರ್.ಸಿ.ಹಿರೇಮಠ ಮತ್ತು ಎಂ.ಎಂ.ಕಲಬುರ್ಗಿ, **ಕನ್ನಡ ಶಾಸನ ಸಂಪದ**, ಪುಟ ೧೩೪

೧೨೮. **ಕರ್ನಾಟಕ ಭಾರತಿ**, ೬/೩, ಪುಟ ೪೩-೫೪

೧೨೯. **ಎಆರ್‌ಐಇ**, ೧೯೫೨-೫೩, ಅಪೆಂಡಿಕ್ಸ್ ಬಿ, ನಂ.೫೪

೧೩೦. **ಕೆಐ**, VI, ನಂ.೨೧

೧೩೧. ಪಾಂಡುರಂಗದೇಸಾಯಿ, **ಕರ್ನಾಟಕದ ಕಲಚೂರಿಗಳು**, ಪುಟ ೩೭-೪೦

೧೩೨. **ಎಆರ್‌ಐಇ**, ೧೯೫೨-೫೩, ಅಪೆಂಡಿಕ್ಸ್ ಬಿ, ನಂ.೫೨

೧೩೩. **ಎಆರ್‌ಐಇ**, ೧೯೫೨-೫೩, ಅಪೆಂಡಿಕ್ಸ್ ಬಿ, ನಂ.೫೩

೧೩೪. **ಇಐ**, XXI, ಪು.೧೯-೨೬

೧೩೫. **ಕೆಐ**, V, ನಂ.೬

೧೩೬. **ಡಿಸ್ಕ್ರಿಪ್ಟೀವ್ ಲಿಸ್ಟ್ ಆಫ್ ಸ್ಟೋನ್ ಅಂಡ್ ಕಾಪರ್ ಪ್ಲೇಟ್ ಇನ್ಸ್ಕ್ರಿಪ್ಷನ್**, ಕೆಆರ್‌ಐ, ೧೯೪೧-೪೨, ನಂ.೯೦

೧೩೭. ತಿಇಐ, XXI, ಪುಟ ೨೮೯-೯೩

೧೩೮. **ಕರ್ನಾಟಕ ಭಾರತಿ**, ೬/೩, ಪುಟ ೪೩-೫೪

೧೩೯. **ಜೆಬಿಬಿಆರ್‌ಎಎಸ್**, ಪುಟ ೨೮೭, ಎ.ಆರ್.ಐ.ಇ. ೧೯೫೨-೫೩

೧೪೦ ಎಆರ್‌ಐಇ, ೧೯೫೨-೫೩, ಅಪೆಂಡಿಕ್ಸ್ ಬಿ, ನಂ.೮೮

೧೪೧ ಎಆರ್‌ಐಇ, ೧೯೫೨-೫೩, ಅಪೆಂಡಿಕ್ಸ್ ಬಿ, ನಂ.೫೪

೧೪೨ ಡಾ.ಪಾಟೀಲ್ ಎಸ್.ಬಿ. **ಕೂಹಂಡಿನಾಡು**, ಪುಟ ೧೮

೧೪೩ **ಕರ್ನಾಟಕ ಭಾರತಿ**, ೬/೩, ಪುಟ ೪೩-೫೪

೧೪೪ ಇಐ, XIX, ಪುಟ ೧೯-೨೬

೧೪೫ ಎಆರ್‌ಐಇ, ೧೯೫೨-೫೩, ಅಪೆಂಡಿಕ್ಸ್ ಬಿ, ನಂ.೫೪

೧೪೬ **ಕರ್ನಾಟಕ ಭಾರತಿ**, ೬/೩, ಪು.೪೩-೫೪

೧೪೭ ಇಐ, XIX, ಪುಟ ೧೯-೨೬

೧೪೮ ಹಿರೇಮಠ ಬಿ.ಆರ್, **ಶಾಸನಗಳಲ್ಲಿ ಕರ್ನಾಟಕದ ವರ್ತಕರು**, ಪುಟ ೧೬೨-೬೩

೧೪೯ ಇಐ, XIX, ಪುಟ ೧೯-೨೬

೧೫೦ ಅಪ್ರಕಟಿತ ಶಾಸನ

೧೫೧ ಆರ್.ಶೇಷಾಶಾಸ್ತ್ರಿ, **ಶಾಸನ ಸಂಚಯ**, ಪುಟ ೭೭

೧೫೨ **ಕರ್ನಾಟಕ ಭಾರತಿ**, ೬/೩, ಪುಟ ೪೩-೫೪

೧೫೩ ಇಐ, XIX, ಪುಟ ೧೯-೨೬

೧೫೪. **ಕರ್ನಾಟಕ ಭಾರತಿ**, ೬/೩, ಪುಟ ೪೩-೫೪

೧೫೫. **ಕರ್ನಾಟಕ ಭಾರತಿ**, ೬/೩, ಪುಟ ೪೩-೫೪

# ಅಧ್ಯಾಯ ನಾಲ್ಕು

## ಕೊಣ್ಣೂರು ಪರಿಸರದ ದೇವಾಲಯಗಳು ಮತ್ತು ಮೂರ್ತಿಶಿಲ್ಪಗಳು

**೧. ಕೊಣ್ಣೂರು ಗ್ರಾಮದಲ್ಲಿರುವ ದೇವಾಲಯಗಳು**

೧.೧ ಪಾರ್ಶ್ವನಾಥ ಬಸದಿ

೧.೨ ಚಿಕಲೇಶ್ವರ ದೇವಾಲಯ

**೨. ಕುಂದರಗಿಯ ದೇವಾಲಯ**

೨.೧. ಸಂಗಮೇಶ್ವರ ದೇವಾಲಯ

**೩. ಗೋಕಾಕ್ ಜಲಪಾತದ ಬಳಿಯಿರುವ ದೇವಾಲಯಗಳು**

೩.೧ ಬಸವೇಶ್ವರ ದೇವಾಲಯ

೩.೨ ಷಣ್ಮುಖ ದೇವಾಲಯ

೩.೩ ಈಶ್ವರಲಿಂಗ ದೇವಾಲಯ

೩.೪ ಮಹಾಲಿಂಗೇಶ್ವರ ದೇವಾಲಯ

೩.೫ ದತ್ತಾತ್ರೇಯ ದೇವಾಲಯ

೩.೬ ಕಾಡಸಿದ್ದೇಶ್ವರ ದೇವಾಲಯ

**೪. ಪಾಚ್ಛಾಪುರದಲ್ಲಿನ ದೇವಾಲಯಗಳು**

೪.೧ ಪಾರ್ಶ್ವನಾಥ ಬಸದಿ

೪.೨ ಮಲ್ಲಿಕಾರ್ಜುನ ದೇವಾಲಯ

೪.೩ ಪಾಚ್ಛಾಪುರದ ಕೋಟೆ

೫. ಮಾವನೂರಿನ ದೇವಾಲಯ

೫.೧ ಬಸವೇಶ್ವರ ದೇವಾಲಯ

೬. ಘೊಡಗೇರಿಯ ದೇವಾಲಯಗಳು

೬.೧ ನೀಲಕಂಠೇಶ್ವರ

೬.೨ ರಾಮಲಿಂಗೇಶ್ವರ

೬.೩ ಗಜಲಿಂಗೇಶ್ವರ ದೇವಾಲಯ

೬.೪ ಪಾರ್ಶ್ವನಾಥ ಬಸದಿ

೭. ಗೋಕಾಕ್ ನಗರದ ದೇವಾಲಯ

೭.೧ ಮಹಾಲಿಂಗೇಶ್ವರ ದೇವಾಲಯ

ಮೂರ್ತಿಶಿಲ್ಪಗಳು

೧. ಗಣೇಶನ ಶಿಲ್ಪಗಳು

೨. ಶಿವ-ಪಾರ್ವತಿಯರ ಶಿಲ್ಪ

೩. ಸೂರ್ಯನ ಶಿಲ್ಪ

೪. ನಾಗ ಮತ್ತು ನಾಗದೇವತೆಯ ಶಿಲ್ಪ

೫. ಭೈರವನ ಶಿಲ್ಪ

೬. ಸಪ್ತಮಾತೃಕೆಯರು

೭. ಗಜಲಕ್ಷ್ಮಿ ಶಿಲ್ಪ

೮. ವಿಷ್ಣುವಿನ ಶಿಲ್ಪ

೯. ಸರಸ್ವತಿ ಶಿಲ್ಪ

೧೦. ಮಹಿಷಾಸುರಮರ್ಧಿನಿ ಶಿಲ್ಪ

೧೧. ಯತಿ ಶಿಲ್ಪ

೧೨. ನಂದಿಯ ವಿಗ್ರಹಗಳು

೧೩. ಸ್ತ್ರೀ ಶಿಲ್ಪ

## ಜೈನ ಶಿಲ್ಪಗಳು

೧. ಪಾರ್ಶ್ವನಾಥ ಶಿಲ್ಪ

೨. ಧರಣೇಂದ್ರ

೩. ಸುಪಾರ್ಶ್ವನಾಥ

೪. ವೀರಗಲ್ಲುಗಳು

೫. ಮಾಸ್ತಿಗಲ್ಲುಗಳು

೬. ನಿಷಿಧಿಗಲ್ಲುಗಳು

# ಅಧ್ಯಾಯ ನಾಲ್ಕು

## ಕೊಣ್ಣೂರು ಪರಿಸರದ ದೇವಾಲಯಗಳು

ಕೊಣ್ಣೂರು ಪರಿಸರದಲ್ಲಿ ಹಲವಾರು ಮಹತ್ವದ ದೇವಾಲಯಗಳು ನಿರ್ಮಾಣವಾಗಿವೆ. ಆಳ್ವಿಕೆ ನಡೆಸಿದ ಹಲವಾರು ಅರಸುಮನೆತನಗಳು ಇಂಥ ಕೊಡುಗೆಗಳಿಗೆ ಪ್ರೋತ್ಸಾಹ ನೀಡಿವೆ. ಹೆಚ್ಚಾಗಿ ರಾಷ್ಟ್ರಕೂಟ, ಕಲ್ಯಾಣದ ಚಾಲುಕ್ಯ ಹಾಗೂ ಅವರ ಸಾಮಂತರಾದ ಸವದತ್ತಿಯ ರಟ್ಟ ಮತ್ತು ಕಲಚೂರಿಗಳ ಕಾಲದಲ್ಲಿ ಇಲ್ಲಿನ ದೇವಾಲಯಗಳು ರಚನೆಯಾಗಿವೆ. ಬೇರೆ ಬೇರೆ ಮತಧರ್ಮಗಳಿಗೆ ಸಂಬಂಧಿಸಿದ ಸ್ಮಾರಕಗಳು ಇವಾಗಿವೆ. ಘಟಪ್ರಭಾ ಹಾಗೂ ಅದರ ಉಪನದಿಗಳಾದ ಮಾರ್ಕಂಡೇಯ ಮತ್ತು ಹಿರಣ್ಯಕೇಶಿ ನದಿಗಳ ಪರಿಸರದಲ್ಲಿ ಲಭ್ಯವಿರುವ ಸ್ಥಳೀಯ ಶಿಲೆಯನ್ನೇ ಬಳಸಿ ಗುಡಿಗೋಪುರಗಳನ್ನು ನಿರ್ಮಿಸಲಾಗಿದೆ. ಬಹುತೇಕ ದೇವಾಲಯಗಳನ್ನು ಕೆಂಪುಮರಳು ಶಿಲೆಯಲ್ಲಿ ನಿರ್ಮಿಸಲಾಗಿದೆ. ಈ ಪರಿಸರದಲ್ಲಿ ನಿರ್ಮಾಣವಾಗಿರುವ ಹೆಚ್ಚಿನ ದೇವಾಲಯಗಳು ಏಕಕೂಟ ದೇವಾಲಯಗಳಾಗಿವೆ. ಕೆಲವು ಮಾತ್ರ ತ್ರಿಕೂಟ ದೇವಾಲಯಗಳು. ಉದಾಹರಣೆಗೆ, ಅರಭಾವಿಯ ಬಸವೇಶ್ವರ ದೇವಾಲಯ, ಕಲ್ಲೊಳ್ಳಿಯ ಪಾರ್ಶ್ವನಾಥ ಬಸದಿ, ಗೋಕಾಕ್ ಜಲಪಾತದ ಎಡ ದಂಡೆಯಲ್ಲಿರುವ ಕಾಡಸಿದ್ದೇಶ್ವರ ದೇವಾಲಯ ಹಾಗೂ ಮಮದಾಪುರದ ಬಸವೇಶ್ವರ ದೇವಾಲಯಗಳು ಈ ವರ್ಗಕ್ಕೆ ಸೇರಿವೆ. ಈ ಪ್ರದೇಶದ ದೇವಾಲಯಗಳು ಷಡ್ವರ್ಗ ಲಕ್ಷಣಗಳಾದ ಅಧಿಷ್ಠಾನ, ಭಿತ್ತಿ, ಪ್ರಸ್ತರ, ಗ್ರೀವ, ಶಿಖರ ಮತ್ತು ಸ್ತೂಪಿಗಳನ್ನು ಒಳಗೊಂಡಿವೆ. ಹೆಚ್ಚಿನ ದೇವಾಲಯಗಳು `ಫಂಸಾನಾ` ಮಾದರಿಯ ಶಿಖರಗಳನ್ನು ಹೊಂದಿವೆ. ಈ ಮಾದರಿಯ ದೇವಾಲಯಗಳಲ್ಲಿ ಅಧಿಷ್ಠಾನ, ಭಿತ್ತಿ ಪ್ರಸ್ತರಗಳಿದ್ದು, ಮೇಲ್ಕಟ್ಟಡವು ಕಂಠ, ಕಪೋತಗಳಿಂದ ಕೂಡಿರುತ್ತವೆ ಹಾಗೂ ಹಂತ ಹಂತವಾಗಿ ಮೇಲೇರುತ್ತಾ ಹೋಗುತ್ತವೆ. ಇಂತಹ ಶಿಖರಗಳಿಗೆ ಕದಂಬನಾಗರ ಶಿಖರಗಳೆಂದೂ ಕರೆಯುವ ವಾಡಿಕೆ ಇದೆ. ಈ ಭಾಗದ ಬಹುತೇಕ ದೇವಾಲಯಗಳಲ್ಲಿ ಸುಖನಾಸಿ ಕಂಡುಬರುವುದು ವಿಶೇಷ. ದೇವಾಲಯದ ಕಕ್ಷಾಸನ, ಅಲಂಕೃತ ಕಂಬಗಳು, ವಿವಿಧ ವಿಭಾಗಗಳನ್ನು ಹೊಂದಿದ ದ್ವಾರಗಳು, ವಿವಿಧ ಜೋಡಣೆ ಹಾಗೂ ಅಲಂಕೃತವಾದ ಶಿಖರಗಳು

ಕಂಡುಬರುತ್ತವೆ. ಕೊಣ್ಣೂರು, ಗೋಕಾಕ್, ಗೋಕಾಕ್ ಜಲಪಾತ (ಫಾಲ್ಸ್), ಪಾಚ್ಛಾಪುರ, ಘೋಡಗೇರಿ, ಕುಂದರಗಿ, ಮಾವನೂರು, ಅರಭಾವಿ, ಕಲೊಳ್ಳಿ, ಮಮದಾಪೂರ, ನಂದಗಾಂವ್, ಸಾವಳಗಿ ಮುಂತಾದ ಕಡೆ ಇಂಥ ಪ್ರಾಚೀನ ದೇವಾಲಯಗಳನ್ನು ಕಾಣಬಹುದಾಗಿದೆ. ಘಟಪ್ರಭಾ ನದಿಯ ದಂಡೆಯ ದೇವಾಲಯದ ಸಂಕೀರ್ಣವೇ ಇದೆ. ಜೊತೆಗೆ ವಿಶಿಷ್ಟ ರೀತಿಯ ಮೂರ್ತಿಶಿಲ್ಪ ವೀರಗಲ್ಲು, ಮಹಾಸತಿಗಲ್ಲು ಹಾಗೂ ನಿಷಿಧಿಗಲ್ಲುಗಳು ಕೂಡಾ ಈ ಪರಿಸರದಲ್ಲಿ ಕಂಡಬರುತ್ತವೆ. ಘೊಡಗೇರಿ, ಕೊಣ್ಣೂರು, ಗೋಕಾಕ್, ಮಾವನೂರು ಮುಂತಾದ ಪ್ರದೇಶಗಳಲ್ಲಿ ಕಾಣಬಹುದಾಗಿದೆ.

### ೧. ಕೊಣ್ಣೂರು ಗ್ರಾಮದಲ್ಲಿರುವ ದೇವಾಲಯಗಳು :

ನವಶಿಲಾಯುಗದ ಕಾಲದಿಂದಲೂ ಜನವಸತಿಯಿರುವ ಕೊಣ್ಣೂರು ಗ್ರಾಮದಲ್ಲಿ ಹಲವಾರು ಶೈವ ಮತ್ತು ಜೈನ ಮಂದಿರಗಳಿವೆ. ಅವುಗಳಲ್ಲಿ ಪಾರ್ಶ್ವನಾಥ ಬಸದಿ ಮತ್ತು ಚಿಕಲೇಶ್ವರ (ಚಿಕದೇವ) ದೇವಾಲಯಗಳು ಪ್ರಮುಖವಾಗಿವೆ. ಕೊಣ್ಣೂರು ಗ್ರಾಮವು ಗೋಕಾಕ್‌ದಿಂದ ವಾಯವ್ಯಕ್ಕೆ ೧೦ ಕಿ.ಮೀ. ದೂರದಲ್ಲಿದೆ.

### ೧.೧ ಪಾರ್ಶ್ವನಾಥ ಬಸದಿ :

ಊರಿನ ಜೈನಗಲ್ಲಿಯಲ್ಲಿರುವ ಈ ದೇವಾಲಯ ಉತ್ತರಾಭಿಮುಖವಾಗಿದ್ದು ಕ್ರಿ.ಶ. ಹನ್ನೊಂದನೆಯ ಶತಮಾನಗಿಂತ ಮೊದಲೇ ನಿರ್ಮಿಸಲಾಗಿದೆ. ಕೆಂಪು ಮರುಳುಶಿಲೆಯಲ್ಲಿ ಇದನ್ನು ಕಟ್ಟಲಾಗಿದೆ. ಇದೊಂದು ಏಕಕೂಟ ರಚನೆಯಾಗಿದ್ದು, ದೇವಾಲಯದಲ್ಲಿ ಗರ್ಭಗೃಹ, ಅಂತರಾಳ ಹಾಗೂ ಸಭಾಮಂಟಪಗಳಿದ್ದು, ಅವು ಸುರಕ್ಷಿತವಾಗಿವೆ. ಇಲ್ಲಿರುವ ಶಾಸನಗಳು ದೇವಾಲಯದ ನಿರ್ಮಾಣ ಹಾಗೂ ಜೀರ್ಣೋದ್ಧಾರದ ಮಾಹಿತಿಗಳನ್ನು ನೀಡುತ್ತವೆ. ಕ್ರಿ.ಶ. ೧೦೮೭ರಲ್ಲಿನ ಆರನೆಯ ವಿಕ್ರಮಾದಿತ್ಯನ ಕಾಲದ ಶಾಸನದಲ್ಲಿ[೧] ಮಹಾಪ್ರಭು ನಿಧಿಯಮಗಾವುಂಡನಿಂದ ನಿರ್ಮಿಸಲ್ಪಟ್ಟ ಬಸದಿಗೆ ಭೂಮಿ, ಎಣ್ಣೆಯ ಗಾಣ ಹಾಗೂ ಹೂದೋಟವನ್ನು ದಾನವಾಗಿ ನೀಡಿದ ಮಾಹಿತಿಗಳನ್ನು ಉಲ್ಲೇಖಿಸಲಾಗಿದೆ. ದಾನ ನೀಡಿದ ವ್ಯಕ್ತಿ ಜೈನಧರ್ಮದ ಪ್ರಮುಖ ಪಂಗಡವಾದ ಮೂಲಸಂಘ ಹಾಗೂ ಬಲಾತ್ಕಾರ ಗಣಕ್ಕೆ ಸೇರಿದವನು. ಇದರಲ್ಲಿ ರಟ್ಟರ ಸೇನ ಹಾಗೂ ಚಾಲುಕ್ಯರ ಜಯಕರ್ಣನ ಉಲ್ಲೆಖಗಳೂ ಇವೆ. ಇಲ್ಲಿನ ಮತ್ತೊಂದು ಶಾಸನದಲ್ಲಿ[೨] ವಿಕ್ರಮಚಕ್ರಿಯ (ವಿಕ್ರಮಾದಿತ್ಯ) ಮಗ ಜಯಕರ್ಣನು ದೇವಾಲಯದ ಪೂಜೆಗಾಗಿ ಮುನಿಗಳಾದ ವಸುಪೂಜ್ಯರಿಗೆ ದಾನ ನೀಡಿದ ಮಾಹಿತಿಗಳಿವೆ. ಇಲ್ಲಿನ ಜನಬಿಂಬ ಶಾಸನದಲ್ಲಿ[೩] ಪಾರ್ಶ್ವನಾಥನ ಪ್ರತಿಮೆಯನ್ನು ಮಾಡಿಸಿದಾತ 'ನಾಗಸೇನ'. ಈತನ ಬಗೆಗೂ ಸಹ ಉಲ್ಲೇಖವಿದೆ. ಈ ಶಾಸನಗಳಿಂದ ಕೊಂಡನೂರು (ಕೊಣ್ಣೂರು) ಪ್ರದೇಶವು ಪ್ರಾಚೀನ ಕಾಲದಲ್ಲಿ ಸುಪ್ರಸಿಧ್ಧ ಜೈನ ಕೇಂದ್ರವಾಗಿತ್ತೆಂಬುದು ಸ್ಪಷ್ಟವಾಗುತ್ತದೆ. ಈ ದೇವಾಲಯದ ಬಗ್ಗೆ ಢಾಕಿ ಮತ್ತು ಗೆರಾರ್ಡ್ ಫೊಕೇಮಾ ಉಲ್ಲೇಖಿಸಿದ್ದಾರೆ.

ಪಾರ್ಶ್ವನಾಥ ಬಸದಿಯ ಪ್ರಮುಖ ಲಕ್ಷಣಗಳು ಈಗಿವೆ. ಗರ್ಭಗೃಹವು ಚೌಕಾಕಾರವಾಗಿದ್ದು, ಮಧ್ಯದಲ್ಲಿ ಇತ್ತೀಚೆಗೆ ನಿರ್ಮಿಸಿದ ಪಾರ್ಶ್ವನಾಥ ಶಿಲ್ಪವಿದೆ. ಗರ್ಭಗೃಹದ ದ್ವಾರವು ತ್ರಿಶಾಖ

ಮಾದರಿಯಲ್ಲಿದ್ದು ಅದರಲ್ಲಿ ಸ್ತಂಭಶಾಖೆಯು ಪ್ರಧಾನವಾಗಿದೆ. ದ್ವಾರದ ಮೇಲ್ಭಾಗದಲ್ಲಿ ದ್ರಾವಿಡ ಮಾದರಿಯ ಶಿಖರದ ಪ್ರತಿಕೃತಿಗಳಿವೆ. ಲಲಾಟದಲ್ಲಿ ಜಿನಬಿಂಬವಿದೆ. ಗರ್ಭಗೃಹಕ್ಕೆ ಹೊಂದಿಕೊಂಡಂತೆ ತೆರೆದ ಅಂತರಾಳವಿದೆ. ದೇವಾಲಯದಲ್ಲಿ ಸಭಾಮಂಟಪವು ಸಂಪೂರ್ಣವಾಗಿ ಜೀರ್ಣೋದ್ಧಾರವಾಗಿರುವುದರಿಂದ ಅಲ್ಲಿ ಯಾವುದೇ ಸ್ತಂಭಗಳಿಲ್ಲ. ಆದರೆ ಅಂತರಾಳದ ಎರಡೂ ಬದಿಯಲ್ಲಿ ಭದ್ರಕ ರೀತಿಯ ಎರಡು ಸ್ತಂಭಗಳು ಹಾಗೂ ಎರಡು ದುಂಡಾದ ಸ್ವತಂತ್ರ ಕಂಬಗಳಿವೆ.

ಬಸದಿಗೆ ಕಪೋತಬಂಧ ಅಧಿಷ್ಠಾನವಿದೆ. ಇದು ಖುರ, ಜಗತಿ, ಪದ್ಮ ಅಂತರಿತ, ಕುಮುದ ಅಂತರಿತ, ಕಪೋತ ಮತ್ತು ನಖರಪಟ್ಟಿಕೆಗಳನ್ನು ಒಳಗೊಂಡಿದೆ. ನಖರಪಟ್ಟಿಕೆಯಲ್ಲಿ ಕೀರ್ತಿಮುಖ, ಮಕರ ಹಾಗೂ ಮನುಷ್ಯರ ಶಿಲ್ಪಗಳಿವೆ. ಭಿತ್ತಿಯು ದೇವಾಲಯದ ಆಕರ್ಷಣೆಯ ಅಂಗಗಳಲ್ಲಿ ಒಂದು. ಈ ದೇವಾಲಯದ ಭಿತ್ತಿಯ ಭದ್ರ ಹಾಗೂ ಸಲಿಲಾಂತರಗಳಿಂದ ಕೂಡಿದ್ದು, ಭದ್ರಗಳ ಮಧ್ಯದಲ್ಲಿ ದ್ರಾವಿಡ ಕೂಟ ಮತ್ತು ಸ್ತಂಭ ಕೋಷ್ಠಗಳ ಅಲಂಕಾರವಿದೆ. ದ್ರಾವಿಡಕೂಟಗಳ ಮಧ್ಯದಲ್ಲಿ ಕಾಯೋತ್ಸರ್ಗ ಭಂಗಿಯಲ್ಲಿರುವ ತೀರ್ಥಂಕರ ಶಿಲ್ಪಗಳಿವೆ. ಕೋಷ್ಠ ಸ್ತಂಭಗಳ ಮೇಲೆ ಲತಿನಾಕೂಟ ಮಾದರಿಯ ಅಲಂಕಾರವಿದೆ. ಈ ಲತಿನಾ ಕೂಟದ ಮಧ್ಯದಲ್ಲಿ ಗವಾಕ್ಷದ ಅಲಂಕಾರವಿದೆ. ಸಲಿಲಾಂತರಗಳಲ್ಲಿ ಮಕರ ತೋರಣದ ಅಲಂಕಾರವಿದ್ದು ಸವೆದು ಹೋಗಿದೆ. ದೇವಾಲಯದ ಹಳೆಯ ಶಿಖರ ಸಂಪೂರ್ಣ ನಾಶವಾಗಿದ್ದು ಸದ್ಯ ನವೀಕೃತ ಶಿಖರವನ್ನು ಕಾಣಬಹುದಾಗಿದೆ.

### ೧.೨ ಚಿಕಲೇಶ್ವರ ದೇವಾಲಯ :

ಇದು ಕೂಡ ಕೊಣ್ಣೂರಿನ ಪ್ರಮುಖ ದೇವಾಲಯಗಳಲ್ಲಿ ಒಂದು. ಊರಿನ ಪೇಟೆಯ ಹತ್ತಿರವಿರುವ ಇದನ್ನು ಕೆಂಪುಮರಳು ಶಿಲೆಯಿಂದ ನಿರ್ಮಿಸಲಾಗಿದ್ದು, ಪೂರ್ವಾಭಿಮುಖವಾಗಿದೆ. ಇದರ ಶಿಖರವು 'ಫಾಂಸಾನ' (ಕದಂಬನಾಗರ) ಮಾದರಿಯದ್ದಾಗಿದ್ದು, ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಿರ್ಮಾಣವಾಗಿದೆ. ದೇವಾಲಯವು ಗರ್ಭಗೃಹ, ಅಂತರಾಳ ಮತ್ತು ನವರಂಗಗಳನ್ನು ಹೊಂದಿದೆ. ನವರಂಗವನ್ನು ಜೀರ್ಣೋದ್ಧಾರ ಮಾಡಲಾಗಿದೆ. ಈ ದೇವಾಲಯಕ್ಕೆ 'ಚಿಕದೇವ' ದೇವಾಲಯವೆಂತಲೂ ಕರೆಯುವರು. ಶಿಖರದ ಮುಂಭಾಗದಲ್ಲಿ ಸುಖನಾಸಿಯಿದೆ. ಇಲ್ಲಿ ಕಲ್ಯಾಣದ ಚಾಲುಕ್ಯರ ದೊರೆ ಒಂದನೆಯ ಸೋಮೇಶ್ವರನ ಕಾಲದ ಕ್ರಿ.ಶ. ೧೦೬೬ರ ಶಾಸನವೊಂದು ದೊರೆತಿದ್ದು,[೪] ಅದರಲ್ಲಿ ಕೊಂಡನೂರಿನ (ಕೊಣ್ಣೂರಿನ) ಕಯಮೇಶ್ವರ ದೇವಾಲಯಕ್ಕೆ ಕಲಿಯಗಾವುಂಡ ಭೂಮಿ, ಮನೆ, ನಿವೇಶನ, ಗಾಣ ಮತ್ತು ಆರು ಗದ್ಯಾನ ಹಣವನ್ನು ದಾನ ನೀಡಿದ ಉಲ್ಲೇಖಗಳಿವೆ. ಸದ್ಯ ಈ ಶಾಸನ ಬೆಳಗಾವಿಯಲ್ಲಿರುವ ವಸ್ತುಸಂಗ್ರಹಾಲಯದಲ್ಲಿದೆ. ದೇವಾಲಯದ ಪ್ರಮುಖ ಲಕ್ಷಣಗಳು ಇಂತಿವೆ.

ಗರ್ಭಗೃಹವು ಚೌಕಾಕಾರವಾಗಿದ್ದು ಮಧ್ಯದಲ್ಲಿ ಲಿಂಗವಿದೆ. ಅಷ್ಟಕೋನಾಕೃತಿಯ ಛತ್ತು ಇದ್ದು ಅದರ ಮಧ್ಯದಲ್ಲಿ ಪದ್ಮದ ಅಲಂಕರಣೆಯಿದೆ. ಗರ್ಭಗೃಹದ ಎಡಪಾರ್ಶ್ವದಲ್ಲಿ ಅಂದರೆ ಉತ್ತರ ದಿಕ್ಕಿಗೆ ಜಲಪ್ರಾಣಾಳಿಯಿದೆ. ಗರ್ಭಗೃಹದ ದ್ವಾರವು ತ್ರಿಶಾಖ ರೀತಿಯಾಗಿದ್ದು ಅದರಲ್ಲಿ ಸ್ತಂಭಶಾಖೆಯು

ಪ್ರಧಾನವಾಗಿದೆ. ಲಲಾಟದಲ್ಲಿ ಸುಖಾಸೀನ ಭಂಗಿಯಲ್ಲಿರುವ ಗಣೇಶನ ಶಿಲ್ಪವಿದೆ. ಬಾಗಿಲವಾಡದ ಮೇಲ್ಭಾಗದಲ್ಲಿ ರೇಖಾನಾಗರ ಹಾಗೂ ದ್ರಾವಿಡ ಮಾದರಿಯ ಶಿಖರಗಳ ಪ್ರತಿಕೃತಿಗಳಿವೆ. ಅಂತರಾಳದ ದ್ವಾರದ ಇಕ್ಕೆಲಗಳಲ್ಲಿ ಜಾಲಂಧರಗಳಿವೆ.

ಗರ್ಭಗೃಹಕ್ಕೆ ಹೊಂದಿಕೊಂಡಂತೆ ಅಂತರಾಳವಿದೆ. ಇದರ ಛತ್ತು ಕೂಡಾ ಅಷ್ಟಕೋನವಾಗಿದ್ದು ಮಧ್ಯದಲ್ಲಿ ಪದ್ಮವನ್ನು ಹೊಂದಿದೆ. ಅಂತರಾಳದ ಬಲಬದಿಯಲ್ಲಿ ಉತ್ತರಾಭಿಮುಖವಾಗಿ ಆಸೀನವಾಗಿರುವ ಗಣಪತಿಯ ಶಿಲ್ಪವಿದೆ. ಅಂತರಾಳದ ಇಕ್ಕೆಲದಲ್ಲಿ ದೇವಕೋಷ್ಟಗಳಿದ್ದು ಅವುಗಳ ಮೇಲ್ಭಾಗದಲ್ಲಿ ದ್ರಾವಿಡ ಮಾದರಿಯ ಸ್ತಂಭಗಳಿವೆ. ಅಂತರಾಳ ಮತ್ತು ಸಭಾಮಂಟಪದಲ್ಲಿ ಭದ್ರಕ ರೀತಿಯ ಸ್ತಂಭಗಳಿವೆ. ನವರಂಗದಲ್ಲಿ ಇತ್ತೀಚೆಗೆ ನಿರ್ಮಿಸಿದ ನಾಲ್ಕು ಸ್ವತಂತ್ರ ಕಂಬಗಳಿವೆ.

ದೇವಾಲಯದ ಅಧಿಷ್ಠಾನವು ಉಪಾನ, ಜಗತಿ, ಅಂತರಿತ, ಕುಮುದ ಮತ್ತು ಕಪೋತ ಭಾಗಗಳನ್ನು ಹೊಂದಿದೆ. ಕಪೋತ ಪಟ್ಟಿಯಲ್ಲಿ ನಾಸಿಯ ಅಲಂಕರಣೆಯನ್ನು ಕಾಣುತ್ತೇವೆ. ದೇವಾಲಯದ ಭಿತ್ತಿಯ ಸರಳವಾದ. ಹೊರತಲ ವಿನ್ಯಾಸವು ತ್ರಿರಥ ಮಾದರಿಯಲ್ಲಿದೆ. ದೇವಾಲಯದ ಶಿಖರವು ಸುತ್ತಲೂ ಹಲ್ಲಿನ ಪಟ್ಟಿಯಾಕಾರದ ರಚನೆಯನ್ನು ಹೊಂದಿದೆ. ಕೂಡಿರುವ ಫಂಸಾನಾ ಮಾದರಿಯ ಈ ಶಿಖರದ ಪಟ್ಟಿಗಳಿಗೆ ನಾಶಿಯ ಅಲಂಕರಣೆ ಇದೆ. ಶಿಖರ ಮುಂಭಾಗದಲ್ಲಿ ಸುಖನಾಸಿ ಇದ್ದು ಅಲ್ಲಿ ಪದ್ಮಾಸನದಲ್ಲಿ ಕುಳಿತ ಶಿವನ ಆಕರ್ಷಕ ಶಿಲ್ಪವಿದೆ.

### ೨. ಕುಂದರಗಿ ದೇವಾಲಯಗಳು :

ಕುಂದರಗಿಯು ಗೋಕಾಕ್ ತಾಲೂಕಿನ ನೈರುತ್ಯಕ್ಕಿರುವ ಕೊನೆಯ ಗ್ರಾಮ. ಮಾರ್ಕಂಡೇಯ ನದಿಯ ದಂಡೆಯ ಮೇಲಿನ ಪ್ರಾಚೀನ ಪ್ರಸಿದ್ಧ ಗ್ರಾಮವು ಆ ಕಾಲದ ಅವಶೇಷಗಳನ್ನು ಉಳಿಸಿಕೊಂಡಿದೆ. ಶಿಲಾಯುಗದಿಂದಲೂ ಇಲ್ಲಿ ಜನವಸತಿಯಿದ್ದಿರುವ ಸೂಚನೆಗಳಿವೆ. ಅಂಥ ಪ್ರಾಚೀನ ನೆಲೆಗಳ ಪ್ರಾಥಮಿಕ ಮಾಹಿತಿಗಳು ಪ್ರಕವಾಗಿವೆ. ರಟ್ಟರ ಕಾಲದಲ್ಲಿ ಆಡಳಿತದ ಚಿಕ್ಕ ವಿಭಾಗವಾಗಿದ್ದ ಕುಂದರಗಿ ಕಂಪಣ ಕೂಹಂಡಿ - ೩೦೦೦ ವಿಭಾಗದಲ್ಲಿ ಹೆಚ್ಚಿನ ಮಹತ್ವ ಪಡೆದಿತ್ತು. ಮುಖ್ಯವಾಗಿ ಜೈನಧರ್ಮೀಯರಿಗೆ ಸಂಬಂಧಿಸಿದ ಪ್ರಾಚ್ಯಾವಶೇಷಗಳು ವಿಫುಲವಾಗಿ ಕಂಡುಬಂದಿವೆ. ಅಲ್ಲದೆ ಕಲ್ಯಾಣ ಚಾಲುಕ್ಯರ ಮಾದರಿಯ ಸಂಗಮೇಶ್ವರ ದೇವಾಲಯವು ಸಹ ಮುಖ್ಯ ಸ್ಮಾರಕ.

### ೨.೧ ಸಂಗಮೇಶ್ವರ ದೇವಾಲಯ :

ಈ ದೇವಾಲಯವು ಅಡವಿಸಿದ್ಧೇಶ್ವರ ಮಠದ ಆವರಣದಲ್ಲಿದೆ. ಈ ಮಠವು ಗ್ರಾಮದ ಎಡಭಾಗದಲ್ಲಿದೆ. ಕೆಂಪುಮರಳು ಶಿಲೆಯಲ್ಲಿ ನಿರ್ಮಾಣವಾಗಿರುವ ಈ ದೇವಾಲಯ ಪೂರ್ವಾಭಿಮುಖವಾಗಿದೆ. ದೇವಾಲಯವು ಗರ್ಭಗೃಹ, ಅಂತರಾಳ ಹಾಗೂ ಮುಖಮಂಟಪಗಳನ್ನು ಹೊಂದಿದೆ. ಇದರ ಶಿಖರ ಕದಂಬನಾಗರ ಮಾದರಿಯಲ್ಲಿದ್ದು ಸುಖನಾಸಿಯನ್ನು ಒಳಗೊಂಡಿರುವುದು. ದೇವಾಲಯದ ಪ್ರಮುಖ ಲಕ್ಷಣಗಳನ್ನು ಈ ಕೆಳಗಿನಂತೆ ವಿವರಿಸಬಹುದು.

ಗರ್ಭಗೃಹವು ಚೌಕಾಕಾರವಾಗಿದ್ದು ಮೇಲ್ಭಾವಣಿಯು ಅಷ್ಟಕೋನ ಮತ್ತು ಪದ್ಮಗಳನ್ನು ಒಳಗೊಂಡಿರುವುದು. ಗರ್ಭಗೃಹದ ಮಧ್ಯದಲ್ಲಿ ಶಿವಲಿಂಗವಿದೆ. ಗರ್ಭಗೃಹಕ್ಕೆ ಹೊಂದಿಕೊಂಡಂತೆ ಅಂತರಾಳವಿದೆ. ಇದರ ಭುವನೇಶ್ವರಿ ಕೂಡ ಅಷ್ಟಕೋನ ಹಾಗೂ ಪದ್ಮದ ಅಲಂಕರಣೆಗಳನ್ನು ಒಳಗೊಂಡಿದೆ. ಅಂತರಾಳದ ದ್ವಾರದ ಇಕ್ಕೆಲಗಳಲ್ಲಿ ಜಾಲಂಧರದ ರಚನೆಯಿದೆ. ಗರ್ಭಗೃಹ ಹಾಗೂ ಅಂತರಾಳದ ದ್ವಾರಗಳು ತ್ರಿಶಾಖ ರೀತಿಯಾಗಿವೆ. ಅವುಗಳಲ್ಲಿ ಸ್ತಂಭಶಾಖೆಯು ಪ್ರಮುಖವಾಗಿದೆ. ಲಲಾಟದಲ್ಲಿ ಗಣೇಶನ ಶಿಲ್ಪವಿದೆ. ದ್ವಾರದ ಮೇಲ್ಭಾಗದಲ್ಲಿ ಗವಾಕ್ಷದ ಅಲಂಕರಣೆಯಿದೆ. ಇದರ ಇಕ್ಕೆಲದಲ್ಲಿ ರೇಖಾನಾಗರ ಹಾಗೂ ದ್ರಾವಿಡ ಶಿಖರಗಳ ಪ್ರತಿಕೃತಿಗಳಿವೆ.

ಅಂತರಾಳಕ್ಕೆ ಹೊಂದಿಕೊಂಡಂತೆ ಸಭಾಮಂಟಪವಿದೆ. ಮುಂದಿನ ಭಾಗವು ಜೀರ್ಣೋದ್ಧಾರಗೊಂಡಿದೆ. ಸಭಾಮಂಟಪದ ಮಧ್ಯದಲ್ಲಿ ನಾಲ್ಕು ಸ್ವತಂತ್ರ ಕಂಬಗಳಿವೆ. ಸಭಾಮಂಟಪದಲ್ಲಿ ನಾಲ್ಕು ದೇವಕೋಷ್ಠಗಳಿದ್ದು ಅವುಗಳ ಮೇಲೆ ದ್ರಾವಿಡ ಶಿಖರ ಮಾದರಿಯ ಪ್ರತಿಕೃತಿಗಳನ್ನು ಕಾಣುತ್ತೇವೆ. ಸಭಾಮಂಟಪದ ಬಲಬದಿಯಲ್ಲಿ ಪ್ರವೇಶದ್ವಾರವಿದ್ದು ಸದ್ಯ ಅದನ್ನು ಮುಚ್ಚಲಾಗಿದೆ. ಸಭಾಮಂಟಪದಲ್ಲಿ ೪ ಸ್ವತಂತ್ರ ಕಂಬಗಳಿದ್ದು, ಅವುಗಳಲ್ಲಿಮುಂದಿನ ಎರಡು ಸ್ತಂಭಗಳನ್ನು ಇತ್ತೀಚೆಗೆ ನಿರ್ಮಿಸಲಾಗಿದೆ. ಉಳಿದ ಎರಡು ಸ್ತಂಭಗಳು ಚಾಲುಕ್ಯ ರೀತಿಯಲ್ಲಿವೆ. ಅವುಗಳನ್ನು ಚೌಕ ಹಾಗೂ ವೃತ್ತಾಕಾರವಾಗಿ ಕೆತ್ತಲಾಗಿದ್ದು ಮೇಲ್ಭಾಗದಲ್ಲಿ ಬೋದಿಗೆಗಳಿವೆ. ಬೋದಿಗೆಯಲ್ಲಿ ಕೀರ್ತಿಮುಖದ ಅಲಂಕರಣೆಯಿದೆ. ಸಭಾಮಂಟಪದಲ್ಲಿನ ಗೋಡೆಗಂಬಗಳು ಭದ್ರಕ ರೀತಿಯಲ್ಲಿವೆ.

ದೇವಾಲಯದ ಅಧಿಷ್ಠಾನವು ಉಪಾನ, ಜಗತಿ, ಅಂತರಿತ, ಕುಮುದ, ನಖರಪಟ್ಟಿಕೆ ಹಾಗೂ ಕಪೋತಗಳನ್ನು ಒಳಗೊಂಡಿದೆ. ದೇವಾಲಯದ ಹೊರಭಿತ್ತಿಯು ಸರಳವಾಗಿದೆ. ಭಿತ್ತಿಯಲ್ಲಿ ಸ್ತಂಭಗಳಿಲ್ಲ. ಆದರೆ ಮೂರು ಕಡೆ ದೇವ ಕೋಷ್ಠಕಗಳಿವೆ. ಇವುಗಳ ಮೇಲೆ ದ್ರಾವಿಡ ಶಿಖರದ ಪ್ರತಿಕೃತಿಗಳಿವೆ. ಭಿತ್ತಿಯ ಮಧ್ಯದಲ್ಲಿ ಸುತ್ತಲೂ ಮೂಲಸ್ಥಾನದ ಪಟ್ಟಿಯಿದೆ. ಈ ಪಟ್ಟಿಯ ಮಧ್ಯದಲ್ಲಿ ರತ್ನಶಾಖೆಯ ಅಲಂಕರಣೆಯಿದೆ. ಭಿತ್ತಿಯ ಹೊರತಲ ವಿನ್ಯಾಸವು ತ್ರಿರಥ ಮಾದರಿಯದ್ದಾಗಿದೆ.

ಈ ದೇವಾಲಯವು 'ಫಾಂಸಾನಾ' ಮಾದರಿಯ ಶಿಖರವನ್ನು ಹೊಂದಿದೆ. ಅದರ ಸ್ತರಗಳಿಗೆ ನಾಸಿಯ ಅಲಂಕರಣೆಯಿದೆ. ಶಿಖರದಲ್ಲಿ ಅನೇಕ ಶಿಲ್ಪಗಳಿಂದ ಅಲಂಕರಣೆಗೊಂಡಿದೆ. ಶಿಖರದಲ್ಲಿ ಉತ್ತರಾಭಿಮುಖವಾಗಿರುವ ಶಿಖರದಲ್ಲಿ ಸ್ತ್ರೀ, ಪದ್ಮಾಸನದಲ್ಲಿ ಕುಳಿತ ಪುರುಷ, ಸ್ತ್ರೀ ಇತ್ಯಾದಿ ಶಿಲ್ಪಗಳಿವೆ. ಪಶ್ಚಿಮಾಭಿಮುಖವಾಗಿರುವ ಶಿಖರದಲ್ಲಿ ಸಮಭಂಗಿಯಲ್ಲಿರುವ ವಿಷ್ಣು ಇತ್ಯಾದಿ ಶಿಲ್ಪಗಳಿವೆ. ದಕ್ಷಿಣಾಭಿಮುಖವಾಗಿರುವ ಶಿಖರದ ಭಾಗದಲ್ಲಿ ಸಮಭಂಗಿಯಲ್ಲಿರುವ ಪುರುಷ, ಪದ್ಮಾಸನದಲ್ಲಿರುವ ಪುರುಷ, ಗಂಧರ್ವ, ಸ್ತ್ರೀ, ಪುರುಷ ಶಿಲ್ಪಗಳು ಹಾಗೂ ಇನ್ನಿತರ ಶಿಲ್ಪಗಳನ್ನು ನೋಡಬಹುದು. ದೇವಾಲಯದ ಶಿಖರದ ಮುಂಭಾಗದಲ್ಲಿ ಸುಖನಾಸಿಯಿದ್ದು, ಅದಕ್ಕೆ ಎರಡೂ ಕಡೆ ಕೀರ್ತಿಮುಖದ ಅಲಂಕೃತ ಫಲಕ ಹಾಗೂ ಶಿವನ ಶಿಲ್ಪಗಳಿವೆ. ದೇವಾಲಯದ ಮುಂಭಾಗದಲ್ಲಿ ಎಡಕ್ಕೆ ಸರಸ್ವತಿ ಹಾಗೂ

ಬಲಬದಿಯಲ್ಲಿ ಸಪ್ತಮಾತೃಕೆಯರ ಶಿಲ್ಪಗಳಿವೆ. ದೇವಾಲಯದ ಕೆಳಗಿನ ಎಲ್ಲಾ ಭಾಗಕ್ಕೆ ಸುಣ್ಣ ಬಳಿಯಲಾಗಿದೆ.

**೩. ಗೋಕಾಕ್ ಜಲಪಾತದ ಬಳಿಯಿರುವ ದೇವಾಲಯಗಳು :**

ಗೋಕಾಕ್‌ದಿಂದ ವಾಯುವ್ಯಕ್ಕೆ ೩.೫ ಮೈಲಿ ದೂರದ ಈ ಪ್ರದೇಶದಲ್ಲಿ ಸುಪ್ರಸಿದ್ಧವಾದ ಜಲಪಾತವಿದೆ. ಘಟಪ್ರಭಾ ನದಿಯಿಂದುಂಟಾದ ಈ ಜಲಪಾತ ಸು. ೧೭೦ ಅಡಿ ಎತ್ತರದಿಂದ ಧುಮುಕುತ್ತದೆ. ಜಲಪಾತದ ಎಡ ಹಾಗೂ ಬಲಗಡೆ ಅಂದರೆ ಘಟಪ್ರಭೆಯ ಉತ್ತರ ಹಾಗೂ ದಕ್ಷಿಣದಲ್ಲಿ ಹತ್ತಾರು ದೇವಾಲಯಗಳಿವೆ. ಈ ಪ್ರದೇಶವನ್ನು ದೇವಾಲಯಗಳ ಸಂಕೀರ್ಣವೆಂದೇ ಕರೆಯುಬಹುದಾಗಿದೆ. ಕಲ್ಯಾಣದ ಚಾಲುಕ್ಯರ ಹಾಗೂ ರಾಷ್ಟ್ರಕೂಟರ ಕಾಲದ ದೇವಾಲಯಗಳು ಇಲ್ಲಿವೆ. ಅವುಗಳಲ್ಲಿ ಬಸವೇಶ್ವರ, ಷಣ್ಮುಖ, ಈಶ್ವರಲಿಂಗ, ಮಹಾಲಿಂಗೇಶ್ವರ, ದತ್ತಾತ್ರೇಯ ಹಾಗೂ ಕಾಡಸಿದ್ಧೇಶ್ವರ ದೇವಾಲಯಗಳು ಪ್ರಮುಖವಾಗಿವೆ.

**೧. ಬಸವೇಶ್ವರ ದೇವಾಲಯ :**

ಗೋಕಾಕ್ ಜಲಪಾತದ ಬಳಿಯಿರುವ ಪ್ರಮುಖ ದೇವಾಲಯಗಳಲ್ಲಿ ಇದು ಒಂದು. ಕಲ್ಯಾಣ ಚಾಲುಕ್ಯರ ಶೈಲಿಯಲ್ಲಿರುವ ಇದು ಪೂರ್ವಾಭಿಮುಖವಾಗಿದೆ. ದೇವಾಲಯವನ್ನು ಕೆಂಪು ಮರುಳು ಶಿಲೆಯಿಂದ ನಿರ್ಮಿಸಲಾಗಿದೆ. ಸು. ೧೧-೧೨ನೆಯ ಶತಮಾನದ 'ಈ ದೇವಾಲಯದಲ್ಲಿ ಗರ್ಭಗೃಹ ತೆರೆದ ಅಂತರಾಳ, ತೆರೆದ ಸಭಾಮಂಟಪವನ್ನು ಹೊಂದಿದೆ. ಬರ್ಗೆಸ್ ಹಾಗೂ ಗೆರಾರ್ಡ್ ಫೋಕೆಮಾ ಈ ದೇವಾಲಯದ ಬಗ್ಗೆ ಉಲ್ಲೇಖಿಸಿದ್ದಾರೆ. ಘಟಪ್ರಭಾ ನದಿಯ ದಕ್ಷಿಣದ ತೀರದಲ್ಲಿರುವ ಈ ದೇವಾಲಯದ ಪ್ರಮುಖ ಲಕ್ಷಣಗಳು ಇಂತಿವೆ.

ಗರ್ಭಗೃಹ ಚೌಕಾಕಾರವಾಗಿದ್ದು ಮಧ್ಯದಲ್ಲಿ ಶಿವಲಿಂಗವಿದೆ. ಅಷ್ಟಕೋನದ ಛತ್ತು ಹಾಗೂ ಪದ್ಮದ ಅಲಂಕರಣೆಯಿದೆ. ಗರ್ಭಗೃಹದ ಮೇಲೆಯೇ ಕದಂಬನಾಗರ ಶೈಲಿಯ ಶಿಖರವಿದೆ. ಗರ್ಭಗುಡಿಯು ಪೂರ್ವಾಭಿಮುಖವಾಗಿದೆ. ಗರ್ಭಗೃಹಕ್ಕೆ ಕೆತ್ತನೆಯ ಬಾಗಿಲಿದ್ದು ಅದು ಪಂಚಶಾಖಾ ರೀತಿಯದ್ದಾಗಿದೆ. ಅದರಲ್ಲಿ ಅರ್ಧಗಂಬ, ಶಾಖೆಯು ಪ್ರಮುಖವಾಗಿದೆ. ಲಲಾಟವು ಬರಿದಾಗಿದ್ದು, ಬಾಗಿಲುವಾಡದ ಮೇಲ್ಭಾಗದಲ್ಲಿ ಮೂರು ಶಿಖರ ಪಟ್ಟಿಕೆಗಳಿವೆ. ಅದರಲ್ಲಿ ಎಡ ಮತ್ತು ಬಲದ ಶಿಖರಗಳು ರೇಖಾನಾಗರ ಹಾಗೂ ಮಧ್ಯದ ಶಿಖರವು ವೇಸರ ಶೈಲಿಯ ಶಿಖರದ ಪಟ್ಟಿಕೆಗಳನ್ನು ಕಾಣಬಹುದು. ಮೂರು ಪಟ್ಟಿಕೆಗಳು ಸ್ತೂಪಿ ಮತ್ತು ಕಲಶಗಳನ್ನು ಹೊಂದಿದೆ. ಅಲ್ಲದೆ ಶಿಖರಪಟ್ಟಿಕೆಗಳ ನಡುವೆ ಪುಷ್ಪಾಲಂಕಾರಾಕಾರದ ರಚನೆಯಿದೆ. ದೇವಾಲಯದಲ್ಲಿ ಗರ್ಭಗುಡಿಯ ಮುಂದೆ ತೆರೆದ ಅಂತರಾಳವಿದೆ. ಇಲ್ಲಿ ಎರಡು ಸ್ವತಂತ್ರಸ್ತಂಭಗಳಿವೆ. ಅಂತರಾಳದ ಛತ್ತೂ ಕೂಡಾ ಅಷ್ಟಕೋನವಾಗಿದ್ದು, ಮಧ್ಯದಲ್ಲಿ ಪದ್ಮದ ಅಲಂಕರಣೆಯನ್ನು ಹೊಂದಿದೆ.

ದೇವಾಲಯಕ್ಕೆ ವಿಶಾಲವಾದ ತೆರೆದ ಸಭಾಮಂಟಪವಿದೆ. ಗೋಡೆಯಲ್ಲಿ ನಾಲ್ಕು ದೇವಕೋಷ್ಠಗಳಿದ್ದು ಸದ್ಯ ಅದರಲ್ಲಿ ಯಾವುದೇ ಶಿಲ್ಪಗಳಿಲ್ಲ ಅಷ್ಟಕೋನಾಕೃತಿಯ ಛತ್ತಿನ ಮಧ್ಯದಲ್ಲಿ ನಕ್ಷತ್ರಕಾರದ ಅಲಂಕಾರವಿದೆ. ಸಭಾಮಂಟಪದಲ್ಲಿ ನಾಲ್ಕು ಸ್ವತಂತ್ರ ಕಂಬಗಳು ಹಾಗೂ ಮೂರು ಕಡೆಯಿಂದ ಪ್ರವೇಶಿಸಲು ತೆರೆದ ಪ್ರವೇಶದ್ವಾರಗಳಿವೆ. ಅಂತರಾಳದಲ್ಲಿ ಎರಡು ಹಾಗೂ ಸಭಾಮಂಟಪದಲ್ಲಿ ನಾಲ್ಕು ಸ್ವತಂತ್ರ ಕಂಬಗಳಿವೆ. ಇವು ಕಲ್ಯಾಣ ಚಾಲುಕ್ಯರ ಶಿಲ್ಪ ಲಕ್ಷಣಗಳನ್ನು ಹೊಂದಿವೆ. ಕಿರಿದಾದ ಕಂಬಗಳು ಉಪಾನ, ನಾಸ, ದಂಡ ಚೌಕಾದ ತಟ್ಟೆಯಾಕಾರದ ಫಲಕಗಳನ್ನು ಒಳಗೊಂಡಿದೆ. ಕಂಬಗಳ ಮಧ್ಯ ಭಾಗದಲ್ಲಿ ೧೬ ಪಟ್ಟಿಕೆಗಳನ್ನು ವೃತ್ತಾಕಾರದ ಭಾಗದಲ್ಲಿ ಖಂಡಿಸಿದ್ದಾರೆ. ಛಾವಣಿಯಲ್ಲಿರುವ ತೊಲೆಗಳು ಹಾಗೂ ಕಂಬಗಳು ನಡುವೆ ಮುಂಚಾಚಿದ ಬೋಧಿಗೆಗಳಿವೆ. ಇವುಗಳ ತುದಿಗೆ ನಾಸಿಯ ಅಲಂಕರಣೆಯನ್ನು ಮಾಡಲಾಗಿದೆ. ದೇವಾಯದ ಮುಖಮಂಟಪದಲ್ಲಿ ವಿಶಾಲವಾದ ಕಕ್ಷಾಸನವಿದೆ. ಮೇಲ್ಭಾಗದಲ್ಲಿ ಇಳಿಜಾರಾದ ಸಜ್ಜ ಇದೆ. ಬಲಬದಿಯ ಕಕ್ಷಾಸನ ಸ್ವಲ್ಪ ಬಿದ್ದುಹೋಗಿದೆ. ಕಕ್ಷಾಸನವೂ ಅಧಿಷ್ಠಾನವನ್ನು ಹೊಂದಿದ್ದು ಅದರಲ್ಲಿ ಉಪಾನ, ಜಗತಿ, ಆಳವಾದ ಮತ್ತು ಎತ್ತರವಾದ ಗಳವನ್ನು ಹೊಂದಿದೆ. ಇದರಲ್ಲಿ ಪುಷ್ಪಪಟ್ಟಿಕೆಯ ರಚನೆ ಇದೆ. ಗಳದ ಮೇಲೆ ಕಪೋತ ಭಾಗವಿದೆ.

ಇಡೀ ದೇವಾಲಯದ ರಚನೆ ಅಧಿಷ್ಠಾನ ಭಾಗವನ್ನೇ ಅವಲಂಬಿಸಿರುತ್ತದೆ. ಅಧಿಷ್ಠಾನದಲ್ಲಿ ಉಪಾನ, ಜಗತಿ, ಆಳವಾದ ಕಡಿಮೆ ಅಗಲಿನ ಗಳ, ತ್ರಿಪಟ್ಟಕ ಕುಮುದ, ಕಪೋತಗಳನ್ನು ಹೊಂದಿದೆ. ಈ ಕಪೋತವು ಹಲ್ಲಿನಾಕಾರಾದ ಪಟ್ಟಿಕೆ (ನಾಸ)ಗಳನ್ನು ಹೊಂದಿದೆ.

ದೇವಾಲಯದ ಹೊರಭಿತ್ತಿ ಸರಳವಾಗಿದ್ದು, ಭಿತ್ತಿಯ ಮೇಲ್ಭಾಗದಲ್ಲಿ ಮುಂಚಾಚಿದ ಭಾಗವಿದ್ದು ಅದು ಗುಡಿಯ ಸುತ್ತಲೂ ಮುಂದುವರೆದಿದೆ. ರತ್ನಶಾಖೆಯಲ್ಲಿ ಚಿತ್ರಪಟ್ಟಿಕೆಗಳಿವೆ.

ದೇವಾಲಯವು 'ಫಂಸಾನಾ' ಮಾದರಿಯ ಶಿಖರವನ್ನು ಹೊಂದಿದೆ. ಎಂಟು ಹಂತಗಳಿದ್ದು ಅವುಗಳಿಗೆ ನಾಸಿಯ ಅಲಂಕರಣೆಯಿದೆ. ಶಿಖರದ ಬಹುಭಾಗವು ಬಿದ್ದುಹೋಗಿದ್ದು ಸುಖನಾಸಿ ಕೂಡಾ ಹಾಳಾಗಿದೆ. ಸುಖನಾಸಿಯಲ್ಲಿದ್ದ ಶಿವನ ಶಿಲ್ಪ ಒಡೆದಿದ್ದು ಸದ್ಯ ದೇವಾಲಯದ ಹಿಂಭಾಗದಲ್ಲಿದೆ.

**೩.೨ ಷಣ್ಮುಖ ದೇವಾಲಯ :**

ಜಲಪಾತದ ಪರಿಸರದಲ್ಲಿನ ದೇವಾಲಯಗಳಲ್ಲಿಯೇ ಅತೀ ಚಿಕ್ಕದಾದ ದೇವಾಲಯವಿದು. ಪೂರ್ವಾಭಿಮುಖವಾಗಿದ್ದು ಕೆಂಪುಮರಳು ಶಿಲೆಯಿಂದ ನಿರ್ಮಿಸಲಾಗಿದೆ. ನೆಲಮಟ್ಟದಿಂದ ಸು. ೨-೩ ಅಡಿ ಆಳದಲ್ಲಿರುವ ಈ ದೇವಾಲಯಕ್ಕೆ ಸಂಪೂರ್ಣವಾಗಿ ಸುಣ್ಣವನ್ನು ಬಳಿಯಲಾಗಿದೆ. ದೇವಾಲಯದಲ್ಲಿ ಗರ್ಭಗೃಹ, ಅಂತರಾಳ ಹಾಗೂ ಮುಖಮಂಟಪವನ್ನು ಕಾಣಬಹುದು.

ದೇವಾಲಯಕ್ಕೆ ಚಿಕ್ಕದಾದ ಗರ್ಭಗೃಹವಿದ್ದು ಚೌಕಾಕಾರವಾಗಿದೆ. ಮಧ್ಯದಲ್ಲಿ ಶಿವಲಿಂಗವಿದ್ದು, ಶಿವಲಿಂಗದ ಹಿಂದಿನ ಭಾಗದಲ್ಲಿ ಇತ್ತೀಚಿನ ನಾಗಶಿಲ್ಪವಿದೆ. ಗರ್ಭಗೃಹದ ದ್ವಾರವೂ ಅತ್ಯಂತ

ಸರಳವಾಗಿದ್ದು ಅದರಲ್ಲಿ ಅರ್ಧಗಂಭಗಳನ್ನು ಕೆತ್ತಲಾಗಿದೆ. ಬಾಗಿಲುವಾಡದ ಲಲಾಟದಲ್ಲಿ ಗಣೇಶನ ಶಿಲ್ಪವನ್ನು ಕಾಣುತ್ತೇವೆ. ಗರ್ಭಗೃಹಕ್ಕೆ ಹೊಂದಿಕೊಂಡಂತೆ ಅಂತರಾಳವಿದ್ದು ಮಧ್ಯದಲ್ಲಿ ನಂದಿಯ ಶಿಲ್ಪವಿದೆ.

ಸಭಾಮಂಟಪಕ್ಕೆ ಹೊಂದಿಕೊಂಡಂತೆ ಚಿಕ್ಕದಾದ ಮುಖಮಂಟಪವಿದೆ. ಇಲ್ಲಿ ಎರಡು ಕಂಬಗಳಿದ್ದು ಅದರ ಸುತ್ತಲೂ ಚಿಕ್ಕ ಗಾತ್ರದ ಕಕ್ಷಾಸನವಿದೆ. ದೇವಾಲಯದ ಕಂಬ ಹಾಗೂ ಬಾಗಿಲವಾಡಗಳನ್ನು ಗಮನಿಸಿದರೆ ಇದು ರಾಷ್ಟ್ರಕೂಟರ ಕಾಲದ ದೇವಾಲಯದ ಹಾಗೆ ಕಂಡುಬರುತ್ತದೆ. ದೇವಾಲಯದಲ್ಲಿ ಭಿತ್ತಿಯ ರಚನೆ ಹಾಗೂ ಶಿಖರಗಳಿಲ್ಲ. ಅಧಿಷ್ಠಾನದ ಭಾಗವೂ ಕೂಡಾ ಮಣ್ಣಲ್ಲಿ ಹೂತಿದೆ.

### ೩.೩ ಈಶ್ವರಲಿಂಗ ದೇವಾಲಯ :

ಘಟಪ್ರಭಾ ನದಿಯ ದಕ್ಷಿಣ ತೀರದಲ್ಲಿರುವ ಈ ದೇವಾಲಯವು ಕೆಂಪು ಮರುಳು ಶಿಲೆಯಿಂದ ನಿರ್ಮಾಣಗೊಂಡಿದೆ. ಈ ದೇವಾಲಯದ ಬಹುತೇಕ ಭಾಗ ಹಾಳಾಗಿದ್ದು, ಮುಂಭಾಗವನ್ನು ಜೀರ್ಣೋದ್ಧಾರ ಮಾಡಲಾಗಿದೆ. ನದಿಯ ದಕ್ಷಿಣ ದಡದ ದೇವಾಲಯಗಳಲ್ಲಿಯೇ ಇದು ಅತ್ಯಂತ ಹಳೆಯ ದೇವಾಲಯ.* ಇದರ ಬಗ್ಗೆ ಬರ್ಗೆಸ್, ಢಾಕಿ ಹಾಗೂ ಪೋಕೇಮಾರವರು ಉಲ್ಲೇಖಿಸಿರುವರು. ದೇವಾಲಯವು ಗರ್ಭಗೃಹ, ಅಂತರಾಳ ಮತ್ತು ಸಭಾಮಂಟಪಗಳನ್ನು ಹೊಂದಿದೆ. ಅವು ಹೀಗಿವೆ.

ಚೌಕಾಕಾರದವಾಗಿದ್ದು ಮಧ್ಯದಲ್ಲಿ ಲಿಂಗವಿದೆ. ಗರ್ಭಗೃಹಕ್ಕೆ ಹೊಂದಿಕೊಂಡಂತೆ ಅಂತರಾಳವಿದೆ. ಗರ್ಭಗೃಹದ ದ್ವಾರವು ಚತುಃಶಾಖಾ ರೀತಿಯದು. ಅದು ಕ್ರಮವಾಗಿ ವಲ್ಲಿ ಸ್ತಂಭ, ವಲ್ಲಿ ಮತ್ತು ರತ್ನ ಶಾಖೆಯನ್ನು ಹೊಂದಿದೆ. ಬಾಗಿಲುವಾಡದ ಮೇಲ್ಭಾಗದಲ್ಲಿ ಫಂಸಾನಾ ಮಾದರಿಯ ಶಿಖರದ ಪ್ರತಿಕೃತಿಗಳಿವೆ. ಕೆಳಭಾಗದಲ್ಲಿ ಬಾಗಿಲಿನ ಇಕ್ಕೆಲಗಳಲ್ಲಿ ಶೈವ ದ್ವಾರಪಾಲಕರಿದ್ದಾರೆ. ಅಂತರಾಳಕ್ಕೆ ಹೊಂದಿಕೊಂಡಂತೆ ಸಭಾಮಂಟಪವಿದ್ದು, ಮಧ್ಯದಲ್ಲಿ ನಾಲ್ಕು ಸ್ವತಂತ್ರ ಕಂಬಗಳಿವೆ. ಇದರ ಗೋಡೆಯು ಜೀರ್ಣೋದ್ಧಾರಗೊಂಡಿದೆ. ಅವುಗಳು ಚೌಕಾಕಾರವಾಗಿದ್ದು ಸರಳ ರಚನೆಯಿಂದ ಕೂಡಿವೆ.

ದೇವಾಲಯಕ್ಕೆ ಕಪೋತಬಂಧ ಅಧಿಷ್ಠಾನವಿದೆ. ಇದು ಉಪಾನ, ಜಗತಿ, ಪದ್ಮ, ಅಂತರಿತ, ಕುಮುದ, ಅಂತರಿತ, ಕಪೋತ ಹಾಗೂ ನಖರ ಪಟ್ಟಿಕೆಗಳನ್ನು ಹೊಂದಿದೆ. ನಖರ ಪಟ್ಟಿಕೆಯಲ್ಲಿ ಮಕರ ತೋರಣ, ಕೀರ್ತಿಮುಖದ ಅಲಂಕರಣೆಯಿದ್ದು, ಆನೆ, ಪುರುಷ ಇತ್ಯಾದಿ ಶಿಲ್ಪಗಳಿವೆ. ಕಪೋತದ ಮೇಲ್ಭಾಗದಲ್ಲಿ ಇನ್ನೊಂದು ಪಟ್ಟಿಕೆಯಿದ್ದು, ಅದು ದೇವಾಲಯದ ಸುತ್ತಲೂ ಮುಂದುವರೆದಿದೆ. ಅದರಲ್ಲಿ ಚೈತ್ಯದ ಮಾದರಿಯ ಅಲಂಕರಣೆಯಿದ್ದು ಆನೆ, ಪುರುಷ ಹಾಗೂ ಇನ್ನಿತರ ಶಿಲ್ಪಗಳಿವೆ. ದೇವಾಲಯದ ಹೊರಭಿತ್ತಿಯು ಸರಳವಾಗಿದ್ದು, ಭಿತ್ತಿಯಲ್ಲಿ ಅರ್ಧಕೋಷ್ಠಕಗಳಿವೆ. ಮಂಟಪಗಳಂತಿರುವ ಅವುಗಳ ಮೇಲ್ಭಾಗದಲ್ಲಿ ನಾಗರ ಮಾದರಿಯ ಶಿಖರದ ಪ್ರತಿಕೃತಿಗಳಿವೆ. ದೇವಾಲಯದ ಶಿಖರ ಸಂಪೂರ್ಣವಾಗಿ ನಾಶವಾಗಿದೆ.

## ೩.೪ ಮಹಾಲಿಂಗೇಶ್ವರ ದೇವಾಲಯ :

ಗೋಕಾಕ್ ಜಲಪಾತದ ಪ್ರದೇಶದಲ್ಲಿರುವ ದೇವಾಲಯಗಳಲ್ಲಿಯೇ ಅತ್ಯಂತ ದೊಡ್ಡದು. ಇದು ಘಟಪ್ರಭಾ ನದಿಯ ದಕ್ಷಿಣದ ತೀರದಲ್ಲಿದ್ದು, ಉತ್ತರಾಭಿಮುಖವಾಗಿದೆ. ಕೆಂಪುಮರುಳು ಶಿಲೆಯಿಂದ ದೇವಾಲಯವನ್ನು ನಿರ್ಮಿಸಲಾಗಿದೆ. ಇದು ಕ್ರಿ.ಶ. ೧೧೭೨ಕ್ಕಿಂತ ಪೂರ್ವದಲ್ಲಿಯೇ ನಿರ್ಮಾಣವಾಗಿರುವ ಮಾಹಿತಿ ಇಲ್ಲಿನ ಶಾಸನದಿಂದ ತಿಳಿದುಬರುವ ಸಂಗತಿಯಾಗಿದೆ. ದೇವಾಲಯವು ಗರ್ಭಗೃಹ, ಅಂತರಾಳ ತೆರೆದ ಮಂಟಪಗಳನ್ನು ಹೊಂದಿದೆ. ಕ್ರಿ.ಶ. ೧೧೭೧ರ ಶಾಸನದ[೭] ಪ್ರಕಾರ ಕಲಚೂರಿ ಚಕ್ರವರ್ತಿ ಭುಜಭಲಮಲ್ಲನ ಮಹಾಮಂಡಳೇಶ್ವರ ಕತ್ತಮದೇವನು ಜಲಪಾತದ ಬಳಿಯಿರುವ ತಟೇಶ್ವರ (ಇಂದಿನ ಮಹಾಲಿಂಗೇಶ್ವರ) ದೇವಾಲಯಕ್ಕೆ ಕುಂದರಗಿ ಕಂಪಣದಲ್ಲಿನ 'ಕೊಂಡನೂರ'ನ್ನು (ಕೊಣ್ಣೂರು) ಅಮೃತರಾಶಿ ಪಂಡಿತರಿಗೆ ದಾನ ನೀಡಿದ ಉಲ್ಲೇಖಗಳಿವೆ. ಅದೇ ರೀತಿಯಾಗಿ ಕಲಚೂರಿ ಚಕ್ರವರ್ತಿಯ ಸಾಮಂತಾಧಿಕಾರಿಯಾದ ದನ್ನುಗಿದೇವ ದಂಡನಾಯಕನು ತಟೇಶ್ವರ ಇಂದಿನ ಮಹಾಲಿಂಗೆಶ್ವರ ದೇವಾಲಯಕ್ಕೆ ಜೀರ್ಣೋದ್ಧಾರ ಹಾಗೂ ಅಂಗಭೋಗ, ನೈವೇದ್ಯಕ್ಕೆ ಕುಂದರಿಯ ಕಂಪಣದ ಬಳಿಯ ಕೊಂಡನೂರಿನ್ನು ದಾನ ಮಾಡಿದ್ದು ತಿಳಿಯುತ್ತದೆ.[೮] ಕ್ರಿ.ಶ. ೧೧೭೩ರ ಶಾಸನವೂ ಕೂಡ[೯] ದೇವಾಲಯಕ್ಕೆ ನೀಡಿದ ದಾನದತ್ತಿಗಳನ್ನು ಕುರಿತು ಉಲ್ಲೇಖಿಸುತ್ತದೆ. ದೇವಾಲಯದ ಪ್ರಮುಖ ಲಕ್ಷಣಗಳು ಇಂತಿವೆ.

ಗರ್ಭಗೃಹವು ಚೌಕಾಕಾರವಾಗಿದ್ದು ಮಧ್ಯದಲ್ಲಿ ಶಿವಲಿಂಗವಿದೆ. ಅಷ್ಟಕೋನದ ಛತ್ತು ಹಾಗೂ ಪದ್ಮದ ಅಲಂಕರಣೆಗಳು ಇಲ್ಲಿವೆ. ಅಂತರಾಳವು ಚೌಕಾಕಾರವಾಗಿದ್ದು ಅದರ ಛತ್ತು ಅಷ್ಟಕೋನಾಕೃತಿಯಾಗಿದ್ದು ಮಧ್ಯದಲ್ಲಿ ಪದ್ಮದ ಅಲಂಕರಣೆಯನ್ನು ಹೊಂದಿದೆ. ಅಂತರಾಳದ ದ್ವಾರಬಾಗಿಲಿನ ಎರಡೂ ಪಾರ್ಶ್ವದಲ್ಲಿ ಜಾಲಂಧರಗಳಿವೆ. ಅಂತರಾಳ ದ್ವಾರದ ಎಡ ಹಾಗೂ ಬಲ ಮೂಲೆಗಳಲ್ಲಿ ದೇವಕೋಷ್ಠಗಳಿವೆ. ಅವುಗಳ ಮೇಲೆ ರೇಖಾನಾಗರ ಶಿಖರದ ಪ್ರತಿಕೃತಿಗಳಿವೆ. ಗರ್ಭಗೃಹ ಹಾಗೂ ಅಂತರಾಳದ ದ್ವಾರಗಳು ತ್ರಿಶಾಖಾ ರೀತಿಯಾಗಿವೆ. ಇವುಗಳಲ್ಲಿ ಅರ್ಧಗಂಭಗಳು ಪ್ರಮುಖವಾಗಿ ಕಾಣುತ್ತವೆ. ಬಾಗಿಲುವಾಡದ ಲಲಾಟದಲ್ಲಿ ಯಾವುದೇ ಶಿಲ್ಪಗಳಿಲ್ಲ. ಅಂತರಾಳದ ಲಲಾಟದಲ್ಲಿ ಪದ್ಮದ ಚಿತ್ರವಿದ್ದು, ಕೆಳಭಾಗದಲ್ಲಿ ಶೈವ ದ್ವಾರಪಾಲಕರನ್ನು ಕೆತ್ತಲಾಗಿದೆ. ದೇವಾಲಯಕ್ಕೆ ತೆರೆದ ಹಾಗೂ ವಿಶಾಲವಾದ ಮುಖಮಂಟಪವಿದೆ. ಇಲ್ಲಿ ನಾಲ್ಕು ಸ್ವತಂತ್ರ ಕಂಬಗಳಿವೆ. ಮಧ್ಯದಲ್ಲಿ ನಂದಿಯಿದೆ. ಮಂಟಪದ ಪ್ರದೇಶಕ್ಕೆ ಮೂರು ಕಡೆಯಿಂದ ದ್ವಾರಗಳಿವೆ. ಮುಖಮಂಟಪದ ಬಲಬದಿಯ ಗೋಡೆಯಲ್ಲಿ ರಟ್ಟರ ಹಾಗೂ ಕಲಚೂರಿ ದೊರೆಗಳಿಗೆ ಸಂಬಂಧಿಸಿದ ಶಾಸನ ಶಿಲ್ಪವಿದೆ.

ದೇವಾಲಯದ ಮುಖಮಂಟಪದಲ್ಲಿ ನಾಲ್ಕು ಸ್ವತಂತ್ರ ಕಂಬಗಳಿದ್ದು ಮಧ್ಯದಲ್ಲಿ ನಂದಿಯಿದೆ. ಕಂಬದ ಮಧ್ಯ ಭಾಗದಲ್ಲಿ ಅಷ್ಟಕೋನಾಕೃತಿಯ ಶಿಲ್ಪದ ಪಟ್ಟಿಕೆಗಳಿವೆ. ಮೇಲ್ಭಾಗದಲ್ಲಿ ವೃತ್ತಾಕಾರದ ಫಲಕ ಹಾಗೂ ಅದರ ಮೇಲೆ ಚೌಕಾದ ಫಲಕಗಳಿವೆ. ಅದರ ಮೇಲೆ ನಾಸಿಯ ಅಲಂಕರಣೆಯನ್ನು ಹೊಂದಿದ ಬೋದಿಗೆಗಳಿವೆ. ದೇವಾಲಯದ ಮುಖಮಂಟಪದಲ್ಲಿ ವಿಶಾಲವಾದ ಕಕ್ಷಾಸನವಿದೆ. ಕಕ್ಷಾಸನವೂ

ಕೂಡ ಅಧಿಷ್ಠಾನವನ್ನು ಹೊಂದಿದೆ. ಅದರಲ್ಲಿ ಉಪಾನ, ಜಗತಿ, ನಖರಪಟ್ಟಿಕೆ, ಕಪೋತ ಭಾಗಗಳಿವೆ. ಕಕ್ಷಾಸನಕ್ಕೆ ಹೊಂದಿಕೊಂಡಂತೆ ದುಂಡುಗೆಯ ಸ್ತಂಭಗಳಿವೆ.

ದೇವಾಲಯಕ್ಕೆ ಕಪೋತಬಂಧ ಅಧಿಷ್ಠಾನವಿದೆ. ಉಪಾನ ಜಗತಿ, ಪದ್ಮ ಅಂತರಿತ, ಕುಮುದ, ಅಂತರಿತ, ಕಪೋತ ಭಾಗಗಳಿವೆ. ದೇವಾಲಯದ ಹೊರಭಿತ್ತಿಯು ಭದ್ರ ಹಾಗೂ ಸಲಿಲಾಂತರಗಳಿಂದ ಕೂಡಿದೆ. ಭದ್ರದಲ್ಲಿ ಕೂಟಸ್ತಂಭಗಳ ಅಲಂಕಾರವಿದೆ. ಈ ಕೂಟಸ್ತಂಭಗಳ ಮೇಲೆ ಲಲನಾ ಮಾದರಿಯ ಶಿಖರಗಳ ಅಲಂಕಾರವಿದೆ. ಮತ್ತು ಸಲಿಲಾಂತಾರಗಳಲ್ಲಿ ತೋರಣದ ಅಲಂಕಾರವಿದೆ. ಭಿತ್ತಿಯ ಮೂರು ಬದಿಯ ಭದ್ರಗಳಲ್ಲಿ ದೇವಕೋಷ್ಠಕಗಳಿವೆ. ಅವುಗಳ ಮೇಲೆಯೂ ಲತಿನಾ ಮಾದರಿಯ ಶಿಖರದ ಪ್ರತಿಕೃತಿಗಳಿವೆ. ಇವುಗಳ ಮಧ್ಯೆ ಗವಾಕ್ಷದ ಅಲಂಕರಣೆಯಿದೆ. ದೇವಕೋಷ್ಠಗಳು ಸದ್ಯ ಬರಿದಾಗಿವೆ. ಭಿತ್ತಿಯ ಹೊರತಲ ವಿನ್ಯಾಸವು ತ್ರಿರಥ ಮಾದರಿಯದ್ದಾಗಿದೆ.

ದೇವಾಲಯದ ಶಿಖರವು ಕಲ್ಯಾಣ ಚಾಲುಕ್ಯರ ಮಾದರಿಯ (ವೇಸರ ಶೈಲಿಯ) ಶಿಖರವನ್ನು ಹೊಂದಿದೆ. ತ್ರಿತಲ ಮಾದರಿಯ ಈ ಶಿಖರದಲ್ಲಿನ ಮೊದಲ ಭಾಗದಲ್ಲಿ ವಿಷ್ಣು, ಸ್ತ್ರೀ, ಕಾಲಭೈರವ, ನೃತ್ಯ ಮಾಡುತ್ತಿರುವ ಸ್ತ್ರೀ ಗಣೇಶ, ಸ್ತ್ರೀ ದೇವತೆ, ಶಿವ, ಗಣೇಶ, ಪದ್ಮಾಸನದಲ್ಲಿ ಕುಳಿತ ಪುರುಷನ ಚಿತ್ರಗಳಿವೆ. ಎರಡನೆಯ ತಲದಲ್ಲಿ ಪದ್ಮಾಸನದಲ್ಲಿ ಕುಳಿತ ಸ್ತ್ರೀ ಗಣೇಶ ಹಾರುತ್ತಿರುವ ಗಂಧರ್ವ, ಮೃದಂಗ ನುಡಿಸುತ್ತಿರುವ ಸ್ತ್ರೀ ಗಣೇಶ, ಸ್ತ್ರೀ ದೇವತೆ, ಇಬ್ಬರು ಸ್ತ್ರೀಯರು ನೃತ್ಯ ಮಾಡುತ್ತಿರುವ ಶಿಲ್ಪ ದಕ್ಷಬ್ರಹ್ಮನ ಶಿಲ್ಪ ಹಾರುತ್ತಿರುವ ಗಂಧರ್ವ ಮುಂತಾದ ಶಿಲ್ಪಗಳನ್ನು ಕೆತ್ತಿದ್ದಾರೆ. ಮುಂಭಾಗದ ಸುಖನಾಸಿಯಲ್ಲಿ ನಾಗಶಿಲ್ಪ ಫಲಕವನ್ನು ನೋಡಬಹುದಾಗಿದೆ.

### ೩.೫ ದತ್ತಾತ್ರೇಯ ದೇವಾಲಯಗಳು :

ಘಟಪ್ರಭಾ ನದಿಯ ಉತ್ತರದ ತೀರದಲ್ಲಿರುವ ದೇವಾಲಯವಿದು. ಕೆಂಪು ಮರುಳು ಶಿಲೆಯ ಈ ದೇವಾಲಯ ಪೂರ್ವಾಭಿಮುಖವಾಗಿದೆ. ಗಾತ್ರದಲ್ಲಿ ಚಿಕ್ಕದಾದರೂ ಪರಿಪೂರ್ಣ ದೇವಾಲಯವಾಗಿದೆ. ಇದು ಗರ್ಭಗೃಹ, ಅಂತರಾಳ ಹಾಗೂ ಮುಖಮಂಟಪವನ್ನು ಹೊಂದಿದೆ. ಇದಕ್ಕೆ ದ್ರಾವಿಡ ನಾಗರ ಶೈಲಿಯ ಶಿಖರವಿದ್ದು, ಇದಕ್ಕಿರುವ ಚೌಕಾದ ಸ್ತೂಪಿಯನ್ನು ಗಮನಿಸಿದಾಗ ಇದು ಬಾದಾಮಿಯ ಚಾಲುಕ್ಯರ ಕಾಲದ ರಚನೆಯಂತೆ ಕಾಣುತ್ತದೆ. ದೇವಾಲಯ ಗರ್ಭಗೃಹದಲ್ಲಿ ತ್ರಿಮುಖ ಮಹೇಶ್ವರನ ಶಿಲ್ಪವಿದ್ದು ಆ ಕಾರಣಕ್ಕಾಗಿ ಈ ದೇವಾಲಯಕ್ಕೆ ದತ್ತಾತ್ರೇಯ ಎಂದು ಕರೆಯುತ್ತಿದ್ದಾರೆ. ಆದರೆ ಇಲ್ಲಿಯೆ ಪ್ರಮುಖವಾದ ಸೂರ್ಯನ ಶಿಲ್ಪವು ಇದ್ದು ಈ ಹಿಂದೆ ಇದು ಸೂರ್ಯ ದೇವಾಲಯವು ಆಗಿರುವ ಸಾಧ್ಯತೆ ಇದೆ. ಬರ್ಗೆಸ್, ಕಸಿನ್ಸ್, ಢಾಕಿ ಹಾಗೂ ಪೋಕೇಮಾರವರು ದೇವಾಲಯದ ಬಗೆಗೆ ಕೆಲವು ವಿವರಗಳನ್ನು ನೀಡಿದರು. ಆದರೆ ಅವು ಹೆಚ್ಚಿನ ಸ್ಪಷ್ಟತೆಯಿಂದ ಕೂಡಿಲ್ಲ.

ಚೌಕಾಕಾರವಾಗಿದ್ದು ಮಧ್ಯದಲ್ಲಿ ಶಿವಲಿಂಗವಿದೆ. ಅದರ ಹಿಂಭಾಗದಲ್ಲಿ ಸೂರ್ಯ ಹಾಗೂ ಮಹೇಶ್ವರನ ಶಿಲ್ಪಗಳಿವೆ. ಗರ್ಭಗೃಹದ ದ್ವಾರವು ಪಂಚಶಾಖಾ ರೀತಿಯಿದ್ದು ಅದರಲ್ಲಿ ಪದ್ಮಪುತ್ರ

ಮಾಲವಳ್ಳಿ ಸ್ತಂಭಶಾಖಾ ಮತ್ತು ರತ್ನಶಾಖೆಗಳು ಇವೆ. ಬಾಗಿಲುವಾಡದ ಲಲಾಟದಲ್ಲಿ ಅಸ್ಪಷ್ಟವಾದ ಶಿಲ್ಪಗಳಿವೆ. ದ್ವಾರದ ಕೆಳಭಾಗದಲ್ಲಿ ಪ್ರತಿಹಾರ, ರತಿ, ಕಾಮ ಮತ್ತು ನದಿದೇವತೆಯ ಶಿಲ್ಪಗಳಿವೆ. ಗರ್ಭಗೃಹದ ಮುಂಭಾಗದಲ್ಲಿ ತೆರೆದ ಅಂತರಾಳವಿದೆ. ಮಧ್ಯದಲ್ಲಿ ನಂದಿಯಿದ್ದು ಇದರ ಸಮತಲ ಛತ್ತಿನಲ್ಲಿ ಸಪ್ತಮಾತೃಕೆಯರ ಶಿಲ್ಪಗಳಿವೆ. ಈ ಚಿತ್ರಪಟ್ಟಿಕೆಯ ಸುತ್ತಲೂ ಅಷ್ಟದಿಕ್ಪಾಲಕರ ಶಿಲ್ಪಗಳಿದ್ದು ಮಧ್ಯದಲ್ಲಿ ನಟೇಶ, ನೃತ್ಯ ಮಾಡುತ್ತಿರುವ ಚಾಮುಂಡಿ ಶಿಲ್ಪವಿದೆ. ಸುತ್ತಲಿನ ಎಂಟು ಪಟ್ಟಿಕೆಗಳಲ್ಲಿ ಗಣೇಶ ಹಾಗೂ ವೀರಭದ್ರರಿಂದ ಕೂಡಿದ ಉಳಿದ ಆರು ಮಾತೃಕೆಯರ ಶಿಲ್ಪಗಳಿವೆ. ಅಡ್ಡತೊಲೆಯಲ್ಲಿ ಸುಖಾಸೀನ ಭಂಗಿಯಲ್ಲಿ ಕುಳಿತಿರುವ ಉಮಾಮಹೇಶ್ವರನ ಶಿಲ್ಪವು, ಆಕರ್ಷಕವಾಗಿದೆ. ಶಿವನ ಎಡತೊಡೆಯ ಮೇಲೆ ಪಾರ್ವತಿ ಆಸೀನಳಾಗಿದ್ದು, ಶಿವನ ಎಡಗೈ ಪಾರ್ವತಿಗೆ ಆಸರೆಯಾದಂತಿದೆ. ಸಭಾಮಂಟಪವು ಸಂಪೂರ್ಣವಾಗಿ ಜೀರ್ಣೋದ್ಧಾರಗೊಂಡಿದ್ದು ಅಲ್ಲಿ ಯಾವುದೇ ರೀತಿಯ ಸ್ತಂಭಗಳಿಲ್ಲ. ಆದರೆ ಅಂತರಾಳದಲ್ಲಿ ಎರಡು ಭದ್ರಕ ರೀತಿಯ ಸ್ತಂಭಗಳಿವೆ. ಇವುಗಳು ತರಂಗ ಮಾದರಿಯ ಬೋದಿಗೆಗಳನ್ನು ಹೊಂದಿವೆ. ಅವುಗಳ ಮೇಲೆ ಭೂತಶಿಲ್ಪಗಳನ್ನು ಕೆತ್ತಲಾಗಿದೆ.

ದೇವಾಲಯದ ಹೊರಭಿತ್ತಿ ಸರಳವಾಗಿದೆ. ಅಲ್ಲಲ್ಲಿ ಅರ್ಧಗಂಬಗಳಿವೆ. ಪ್ರಸ್ತರ ಭಾಗದಲ್ಲಿ ಕಪೋತವನ್ನು ಹೊಂದಿದೆ. ಇದು ದ್ರಾವಿಡ-ನಾಗರ ಮಾದರಿಯ ಶಿಖರವನ್ನು ಹೊಂದಿದೆ. ಶಿಖರವು ಎರಡು ತಲಗಳನ್ನು ಹೊಂದಿದ್ದು ಭಿತ್ತಿಯ ಮೇಲೆ ಉತ್ತರ ವಲ್ಲಭಿ ಮಕರ ಪಟ್ಟಿಕೆಗಳಿವೆ. ಕೂಡ್ಯಾ ಪೋತಿಕಾದ ಮಕರದಲ್ಲಿ ಪದ್ಮಗಳಿವೆ. ಇದರ ಮೇಲೆ ಎರಡನೆಯ ತಳವಿದ್ದು ಕುಡ್ಯಸ್ತಂಭಗಳ ಅಲಂಕೃತವಾಗಿದೆ. ಹಾರಭಾಗವು ಅಲಂಕೃತವಾಗಿದೆ. ಇದರ ಮೇಲೆ ಬ್ರಹ್ಮಚಂದ ಶಿಖರವಿದ್ದು, ಮೇಲೆ ಚೌಕಾಕಾರದ ಸ್ತೂಪಿಯಿದೆ. ಇದು ಬಾದಾಮಿ ಚಾಲುಕ್ಯರ ಮಾದರಿಯಲ್ಲಿದೆ.

### ೩.೬ ಕಾಡಸಿದ್ದೇಶ್ವರ ದೇವಾಲಯಗಳು :

ಜಲಪಾತದ ಆಸುಪಾಸಿನ ದೇವಾಲಯಗಳ ಏಕೈಕ ತ್ರಿಕೂಟಾಚಲ ದೇವಲಾಯವಿದು ನದಿಯ ಉತ್ತರತೀರದಲ್ಲಿರುವ ದೇವಾಲಯಗಳಲ್ಲಿಯೇ ದೊಡ್ಡದಾದ ದೇವಾಲಯವಿದು. ಸು. ೧೧ನೆಯ ಶತಮಾನದಲ್ಲಿ ನಿರ್ಮಿತವಾದಂತಿರುವ ಇದೂ ಕೂಡ ಕೆಂಪು ಮರಳುಶಿಲೆಯಿಂದ ಕಟ್ಟಲ್ಪಟ್ಟಿದೆ. ಮೂರು ಗರ್ಭಗೃಹ, ತೆರೆದ ಅಂತರಾಳಗಳು ಹಾಗೂ ವಿಶಾಲವಾದ ಸಭಾಮಂಟಪವನ್ನು ಹೊಂದಿದೆ. ಈ ದೇವಾಲಯದ ಬಗ್ಗೆ ಬರ್ಗೆಸ್, ಕಸೆನ್ಸ್, ಹಾರ್ಡಿ, ಢಾಕಿ ಹಾಗೂ ಫೋಕೇಮಾ ಮುಂತಾದ ವಿದ್ವಾಂಸರು ಶಾಸ್ತ್ರೀಯ ನೆಲೆಯಲ್ಲಿ ವಿವರಿಸುವ ಪ್ರಯತ್ನ ಮಾಡಿದ್ದಾರೆ.

ಈ ದೇವಾಲಯವು ತ್ರಿಕೂಟಚಲವಾಗಿದ್ದು ಮೂರುಗರ್ಭಗಳನ್ನು ಹೊಂದಿದೆ. ಇವುಗಳಲ್ಲಿ ಅಷ್ಟಕೋನದ ಛತ್ತು ಹಾಗೂ ಪದ್ಮದ ಅಲಂಕರಣೆಯಿದೆ. ಪೂರ್ವ, ದಕ್ಷಿಣ ಹಾಗೂ ಉತ್ತರಾಭಿಮುಖವಾಗಿ ಗರ್ಭಗೃಹಗಳಿದ್ದು, ಅದರಲ್ಲಿ ಪೂರ್ವಾಭಿಮುಖವಾಗಿರುವ ಗರ್ಭಗೃಹವೇ ಪ್ರಮುಖವಾಗಿದೆ. ಅದರ ಮೇಲೆಯೇ ಪ್ರಮುಖವಾದ ಶಿಖರವಿದೆ. ಪಶ್ಚಿಮ ಹಾಗೂ ದಕ್ಷಿಣಾಭಿಮುಖದ ಗರ್ಭಗಳು ತದನಂತರದ

ಕಾಲದ ಸೇರ್ಪಡೆಯೆಂಬಂತೆ ಕಾಣುತ್ತವೆ.[೧೦] ಮೂರು ಗರ್ಭಗೃಹಗಳಲ್ಲಿ ಲಿಂಗಗಳಿವೆ. ದಕ್ಷಿಣ ಹಾಗೂ ಪಶ್ಚಿಮಾಭಿಮುಖವಾಗಿರುವ ಗರ್ಭಗೃಹಗಳ ದ್ವಾರಗಳು ಅತ್ಯಂತ ಸರಳ ರೀತಿಯಾಗಿವೆ. ಆದರೆ ಪೂರ್ವಾಭಿಮುಖವಾಗಿರುವ ಗರ್ಭಗೃಹದ ಬಾಗಿಲುವಾಡವು ಕೆತ್ತನೆಯಿಂದ ಕೂಡಿದ್ದು ಪಂಚಶಾಖೆಯನ್ನು ಹೊಂದಿದೆ. ಅದರಲ್ಲಿ ಕಂಬ, ಪದ್ಮ, ರೂಪ, ವಲ್ಲಿ ಮತ್ತು ರತ್ನ ಶಾಖೆಗಳನ್ನು ಹೊಂದಿದೆ. ಲಲಾಟದಲ್ಲಿ ಗಣೇಶನ, ಗಜಲಕ್ಷ್ಮಿ ಹಾಗೂ ವಿದ್ಯಾಧರನ ಶಿಲ್ಪಗಳಿವೆ. ಬಾಗಿಲುವಾಡದ ಕೆಳಭಾಗದಲ್ಲಿ ಕಾಮ, ರತಿ ಹಾಗೂ ಸ್ತ್ರೀಯರ ಶಿಲ್ಪಗಳಿವೆ. ಮೂರು ಗರ್ಭಗೃಹಗಳಿಗೆ ಹೊಂದಿಕೊಂಡಂತೆ ಮೂರು ತೆರೆದ ಅಂತರಾಳಗಳಿವೆ. ಪೂರ್ವಾಭಿಮುಖವಾಗಿರುವ ಅಂತರಾಳದ ಛತ್ತಿನಲ್ಲಿ ಶಿಲ್ಪಪಟ್ಟಿಕೆಗಳನ್ನು ಕೆತ್ತಲಾಗಿದೆ. ಅವುಗಳ ಸುತ್ತಲೂ ಅಷ್ಟದಿಕ್ಪಾಲಕರ ಶಿಲ್ಪಗಳಿವೆ. ಮಧ್ಯದಲ್ಲಿ ನಟೇಶನ ಶಿಲ್ಪವಿದೆ. ಪಶ್ಚಿಮಾಭಿಮುಖವಾಗಿರುವ ಗರ್ಭಗೃಹಕ್ಕೆ ಹೊಂದಿಕೊಂಡಂತೆ ಅಂತರಾಳದ ಛತ್ತಿನಲ್ಲಿ ಕಮಲವಿದೆ. ದಕ್ಷಿಣ ಭಾಗದ ಅಂತರಾಳದ ಗೋಡೆಯಲ್ಲಿ ಗಣೇಶ ಹಾಗೂ ಸೂರ್ಯನ ಶಿಲ್ಪವನ್ನು ಕಂಡರಿಸಿದ್ದಾರೆ. ಮೂರು ಅಂತರಾಳಕ್ಕೆ ಹೊಂದಿಕೊಂಡಂತೆ ನವರಂಗವಿದೆ. ಇವರಲ್ಲಿ ನಾಲ್ಕು ಸ್ವತಂತ್ರ ಕಂಬಗಳಿವೆ. ನವರಂಗದಲ್ಲಿರುವ ನಾಲ್ಕು ಸ್ವತಂತ್ರ ಕಲ್ಲುಗಳು ಚಿತ್ರಖಂಡ ರೀತಿಯಲ್ಲಿವೆ. ಈ ಕಂಬಗಳ ಚೌಕಾದ ಹಾಗೂ ಆಯತಾಕಾರದಲ್ಲಿವೆ. ಅವುಗಳ ಮೇಲೆ ಚಿತ್ರಗಳನ್ನು ಕಂಡರಿಸಿದ್ದಾರೆ. ಚೌಕಾದ ಭಾಗದ ಮೇಲ್ಭಾಗದಲ್ಲಿ ವೃತ್ತಾಕಾರದ ಫಲಕಗಳಿದ್ದು ತುದಿಯಲ್ಲಿ ಬೋದಿಗೆಗಳನ್ನು ನಿರ್ಮಿಸಲಾಗಿದೆ. ಅವು ಮುಂಚಾಚಿದ್ದು ಅವುಗಳ ಮೇಲೆ ಯಕ್ಷ-ಯಕ್ಷಿಣಿಯರ ಶಿಲ್ಪಗಳಿವೆ. ಈ ಶಿಲ್ಪಗಳು ದೇವಾಲಯವನ್ನೇ ಎತ್ತಿಹಿಡಿದಿರುವಂತೆ ಕಾಣುತ್ತವೆ.

ದೇವಾಲಯವು ಕಪೋತಬಂಧ ಅಧಿಷ್ಠಾನವನ್ನು ಹೊಂದಿದೆ. ಇದರಲ್ಲಿ ಖುರ, ಜಗತಿ, ಪದ್ಮ, ಅಂತರಿತ, ಕುಮುದ, ಅಂತರಿತ ಮತ್ತು ಕಪೋತ ಭಾಗಗಳನ್ನು ಹೊಂದಿದೆ. ದೇವಾಲಯ ಹೊರಭಿತ್ತಿಯು ಸರಳವಾಗಿದೆ. ಅದರಲ್ಲಿಅರ್ಧಗಂಭಗಳಿವೆ. ಪೂರ್ವಾಭಿಮುಖವಾಗಿರುವ ಗರ್ಭಗೃಹದ ಭಿತ್ತಿಯ ಮೇಲೆ ಪ್ರತಿ, ಕಂಠ ಹಾಗೂ ಪ್ರಸ್ತುರ ಭಾಗ (ಹಾರ)ದಲ್ಲಿ ನೃತ್ಯ ಮಾಡುತ್ತಿರುವ ಪುರುಷ, ಸ್ತ್ರೀ, ಮಿಥುನಶಿಲ್ಪ, ಕಿನ್ನರ, ನಿಂತ ಪುರುಷ, ಗಣೇಶ ಹಾಗೂ ಕೈಯಲ್ಲಿ ಸರ್ಪಹಿಡಿದ ಪುರುಷನ ಶಿಲ್ಪಗಳಿವೆ. ಪೂರ್ವಾಭಿಮುಖವಾಗಿರುವ ಗರ್ಭಗೃಹದ ಮೇಲೆ ಶಿಖರವು ಇದೆ. ಇದು ಎರಡು ತಲಗಳನ್ನು ಹೊಂದಿರುವುದರಿಂದ ದ್ವಿತಳ ವಿಮಾನ ದೇವಾಲಯವೆಂದು ಹೇಳಬಹುದು. ಎರಡನೆಯ ತಳದ ಭಿತಿಯಲ್ಲಿ ಭದ್ರ ಹಾಗೂ ಸಲಿಲಾಂತರಗಳಿದ್ದು, ಇವುಗಳ ಮಧ್ಯದಲ್ಲಿ ಕುಡ್ಯ ಸ್ತಂಭಗಳಿವೆ. ಎರಡನೆಯ ತಳದ ಪ್ರತಿಕಂಠ ಮತ್ತು ಹಾರಭಾಗವು ಅಲಂಕೃತವಾಗಿದೆ. ಈ ದೇವಾಲಯದ ಪೂರ್ವಾಭಿಮುಖ ಹಾಗೂ ದಕ್ಷಿಣಾಭಿಮುಖವಾಗಿರುವ ಗರ್ಭಗೃಹಗಳು ದ್ರಾವಿಡ ಮಾದರಿಯ ಶಿಖರಗಳನ್ನು ಹೊಂದಿದೆ. ಪ್ರಾಯಶಃ ಇವು ನಂತರದ ಜೋಡಣೆಯಾಗಿರಬಹುದು. ಸದ್ಯ ಈ ದೇವಾಲಯವನ್ನು ಮಾಧವಾನಂದ ಆಶ್ರಮವಾಗಿ ಬಳಸಲ್ಪಡುತ್ತಿದೆ. ಪಶ್ಚಿಮಾಭಿಮುಖವಾಗಿರುವ ಗರ್ಭಗೃಹದ ಮೇಲೆ ಶಿಥಿಲವಾದ ಫಂಸಾನಾ ಶಿಖರವಿದೆ. ದಕ್ಷಿಣಾಭಿಮುಖದ ಶಿಖರದ ಮುಂದಿನ ಸುಖನಾಸಿಯಲ್ಲಿ ಚಾಮುಂಡಿಯ ಶಿಲ್ಪವಿದೆ.

## ೪. ಪಾಚ್ಛಾಪುರದಲ್ಲಿರುವ ದೇವಾಲಯಗಳು :

ಪಾಚ್ಛಾಪುರವು ಮಾರ್ಕಂಡೇಯ ನದಿಯ ತೀರದ ಪ್ರಮುಖ ಊರುಗಳಲ್ಲಿ ಒಂದು. ಹುಕ್ಕೇರಿಯಿಂದ ಆಗ್ನೇಯಕ್ಕೆ ಸು. ೨೫ ಕಿ.ಮೀ. ದೂರದಲ್ಲಿರುವ ಇದು ಶಿಲಾಯುಗದ ಕಾಲದಿಂದಲೂ ಜನವಸತಿಯಿರುವ ಪ್ರದೇಶ. ಪ್ರಾಚೀನ ಕಾಲದಲ್ಲಿ ಕುಂದರನಾಡಿನ ಪ್ರಸಿದ್ಧವಾದ ಊರಿದು. ಈ ಊರು ಕಡಿದಾದ ದಿಬ್ಬದ ಪರಿಸರದಲ್ಲಿ ಹರಡಿದ್ದು ಅಲ್ಲಿ ಆದಿಲ್‌ಷಾಹಿಗಳ ಅಧಿಕಾರಿಗಳು ನಿರ್ಮಿಸಿದ ಕೋಟೆಯ ಅವಶೇಷಗಳಿವೆ. ಇಲ್ಲಿ ಕಲ್ಯಾಣ ಚಾಲುಕ್ಯರ ಕಾಲದ ಮಲ್ಲಿಕಾರ್ಜುನ ದೇವಾಲಯ, ಸಂಪೂರ್ಣವಾಗಿ ಬಿದ್ದುಹೋಗಿರುವ ಬಸವಣ್ಣ ದೇವಾಲಯ - ಬಸದಿ ಹಾಗೂ ದಿಬ್ಬದ ಮೇಲಣ ಕೋಟೆ, ಈ ಊರಿನ ಪ್ರಮುಖವಾದ ಪ್ರಾಚೀನ ಸ್ಮಾರಕಗಳಾಗಿವೆ.

### ೪.೧ ಮಲ್ಲಿಕಾರ್ಜುನ ದೇವಾಲಯ :

ಮೂಲ ದೇವಾಲಯದ ಕೆಲ ಭಾಗವನ್ನು ನವೀಕರಿಸಲಾಗಿದೆ. ಕಲ್ಯಾಣ ಚಾಲುಕ್ಯರ ಕಾಲದ ಈ ದೇವಾಲಯವನ್ನು ಕೆಂಪು ಮರಳುಶಿಲೆಯಿಂದ ನಿರ್ಮಿಸಲಾಗಿದೆ. ಇದು ಗರ್ಭಗೃಹ, ಅಂತರಾಳ ಹಾಗೂ ನವರಂಗಗಳನ್ನು ಹೊಂದಿದೆ, ಹಾಗೂ ಜೀರ್ಣೋದ್ಧಾರಗೊಂಡಿರುವ ಕದಂಬನಾಗರ ಶಿಖರವು ದೇವಾಲಯಕ್ಕಿದೆ.

ಗರ್ಭಗೃಹವು ಚೌಕಾರಾರವಾಗಿದ್ದು ಮಧ್ಯದಲ್ಲಿ ಲಿಂಗವಿದೆ. ಲಿಂಗದ ಹಿಂಭಾಗದಲ್ಲಿ ಕಟ್ಟೆಯನ್ನು ನಿರ್ಮಿಸಲಾಗಿದೆ. ಇಲ್ಲಿನ ಲಿಂಗವು ನಿತ್ಯವೂ ಪೂಜಿಸಲ್ಪಡುತ್ತದೆ. ಗರ್ಭಗುಡಿಯ ಎಡಪಾರ್ಶ್ವದಲ್ಲಿ ಜಲಪ್ರಣಾಳಿಯಿದೆ. ಗರ್ಭಗೃಹ ಹಾಗೂ ಅಂತರಾಳದ ದ್ವಾರಗಳು ಸರಳ ರೀತಿಯಲ್ಲಿವೆ. ಲಲಾಟದಲ್ಲಿ ಗಣೇಶನ ಶಿಲ್ಪವಿದೆ. ಬಾಗಿಲವಾಡವು ಅರ್ಧಗಂಬ ಹಾಗೂ ಪುಷ್ಪಪಟ್ಟಿಕಾ ಶಾಖೆಗಳನ್ನು ಹೊಂದಿದೆ. ಅಂತರಾಳದ ದ್ವಾರದ ಇಕ್ಕೆಲಗಳಲ್ಲಿ ಜಾಲಂಧ್ರಗಳಿವೆ. ಜೊತೆಗೆ ಅರ್ಧಗಂಬಗಳೂ ಇವೆ. ಅವುಗಳಲ್ಲಿ ವೃತ್ತ, ಆಯಕ ಹಾಗೂ ಅಷ್ಟಕೋನ ಪಟ್ಟಿಕೆಗಳನ್ನು ರಚಿಸಿದ್ದಾರೆ. ಅಂತರಾಳದ ಇಕ್ಕೆಲದ ಮೂಲೆಗಳಲ್ಲಿ ಕೋಷ್ಟಗಳಿದ್ದು ಅವು ಒಂದಾಗಿವೆ. ಅವುಗಳ ಮೇಲ್ಭಾಗದಲ್ಲಿ ದ್ರಾವಿಡ ಶಿಖರದ ಮಾದರಿಗಳಿವೆ. ಬಾಗಿಲವಾಡದ ಮೇಲ್ಭಾಗದಲ್ಲಿ ನಾಗರ ಶೈಲಿಯ ಶಿಖರದ ಪ್ರತಿಕೃತಿಗಳಿವೆ. ದೇವಾಲಯದಲ್ಲಿ ಗರ್ಭಗೃಹಕ್ಕೆ ಹೊಂದಿಕೊಂಡಂತೆ ಅಂತರಾಳವಿದೆ. ಇದರ ಪ್ರವೇಶದ್ವಾರದ ಇಕ್ಕೆಲಗಳಲ್ಲಿ ಜಾಲಂಧರಗಳಿವೆ. ದೇವಾಲಯದ ನವರಂಗದಲ್ಲಿ ನಾಲ್ಕು ಸ್ವತಂತ್ರ ಸ್ತಂಭಗಳಿವೆ. ಅವು ಚಾಲುಕ್ಯ ಮಾದರಿಯಲ್ಲಿದ್ದು ದಂಡಭಾಗದ ಮೇಲ್ಭಾಗದಲ್ಲಿ ಚೌಕಾಕಾರದ ಅಲಂಕರಣೆಯ ಪಟ್ಟಿಕೆಗಳಿವೆ. ಅದರ ಮೇಲೆ ೧೬ ಪಟ್ಟಿಕೆಗಳ ರಚನೆಯಿದೆ. ಇದರ ಮೇಲೆ ವೃತ್ತಾಕಾರದ ತಟ್ಟೆಯಾಕಾರದ ರಚನೆಯನ್ನು ಕಾಣಬಹುದು. ಮೇಲ್ಭಾಗದಲ್ಲಿ ಮುಂಚಾಚಿದ ಬೋದಿಗಳಿವೆ. ಅಲ್ಲಿನ ನವರಂಗದ ಒಂದು ಸ್ತಂಭದ ಕೆಳಭಾಗದಲ್ಲಿ ಗಣೇಶನ ಶಿಲ್ಪವನ್ನು ಇಡಲಾಗಿದೆ.

ದೇವಾಲಯದ ಅಧಿಷ್ಠಾನ ಮಣ್ಣಲ್ಲಿ ಹೂತಿರುವುದರಿಂದ ಮಾಹಿತಿಗಳು ಅಸ್ಪಷ್ಟ. ಕುಮುದ, ಪ್ರತಿ, ಕಪೋತಗಳ ಭಾಗಗಳನ್ನು ದೇವಾಲಯವು ಹೊಂದಿರಬಹುದಾಗಿದೆ. ದೇವಾಲಯಕ್ಕೆ ಸಂಪೂರ್ಣವಾಗಿ ಸುಣ್ಣ

ಬಳಿಯಲಾಗಿದೆ. ದೇವಾಲಯದ ಹೊರಭಾಗದ ಗೋಡೆಯನ್ನು ಜೀರ್ಣೋದ್ಧಾರ ಮಾಡಿರುವುದರಿಂದ ಅಲ್ಲಿ ಭಿತ್ತಿಯಲ್ಲಿರುವ ಅಲಂಕರಣೆಗಳು ಕಂಡುಬರುವುದಿಲ್ಲ. ದೇವಾಲಯಕ್ಕೆ ಸಂಪೂರ್ಣವಾಗಿ ನವೀಕರಿಸಿದ ಕದಂಬರ ನಾಗರ ಶೈಲಿಯ ಶಿಖರವಿದೆ.

**೪. ಪಾರ್ಶ್ವನಾಥ ಬಸದಿ :**

ಪಾಚ್ಛಾಪುರದ ಊರಿನ ಮಧ್ಯ ಒಂದು ಬಸೀದಿ ಇದೆ. ಅದೇ ಪಾರ್ಶ್ವನಾಥ ಬಸದಿ. ಇದು ಸಂಪೂರ್ಣವಾಗಿ ಜೀರ್ಣೋದ್ಧಾರಗೊಂಡಿದೆ. ಗರ್ಭಗೃಹ, ಅಂತರಾಳ ಮತ್ತು ನವರಂಗಗಳನ್ನು ಹೊಂದಿದ್ದು, ಮುಖಮಂಟಪ ಇತ್ತೀಚಿನದು. ಇಲ್ಲಿನ ಶಾಸನದ ಪ್ರಕಾರ ೧೬೭ಲಕ್ಕಿಂತ ಮುಂಚೆಯೇ ಈ ಬಸದಿಯನ್ನು ನಿರ್ಮಿಸಿರಬಹುದೆಂದು ತಿಳಿಯುತ್ತದೆ.

ಗರ್ಭಗೃಹವು ಚೌಕಾಕಾರವಾಗಿದ್ದು, ಮಧ್ಯದಲ್ಲಿ ಸಮಭಂಗಿಯಲ್ಲಿ ನಿಂತಿರುವ ಪಾರ್ಶ್ವನಾಥನ ಶಿಲ್ಪವಿದೆ. ಗರ್ಭಗೃಹದ ಒಳಛತ್ತು ಅಷ್ಟಕೋನ ಹಾಗೂ ಪದ್ಮದ ಅಲಂಕರಣೆಯನ್ನು ಹೊಂದಿದೆ. ಪಾರ್ಶ್ವನಾಥನ ವಿಗ್ರಹವು ಕಪ್ಪುಛಾಯೆಯನ್ನು ಹೊಂದಿದ್ದು, ಅದರ ಪಾದಪೀಠದಲ್ಲಿ ಶಾಸನವಿದ್ದು,ಇದು ಕ್ರಿ.ಶ. ೧೯೭೬ಕ್ಕಿಂತ ಮೊದಲೇ ಈ ಗುಡಿಯಲ್ಲಿ ವಿಗ್ರಹವನ್ನು ಸ್ಥಾಪಿಸಿರುವ ಮಾಹಿತಿಯನ್ನು ನೀಡುತ್ತದೆ. ಗರ್ಭಗೃಹಕ್ಕೆ ಹೊಂದಿಕೊಂಡಂತೆ ಅಂತರಾಳವಿದೆ. ಇದರ ಒಳಛತ್ತು ಕೂಡ ಅಷ್ಟಕೋನ ಹಾಗೂ ಪದ್ಮದ ಅಲಂಕರಣೆಯನ್ನು ಹೊಂದಿದೆ. ಗರ್ಭಗೃಹದ ದ್ವಾರವು ಸರಳವಾಗಿದ್ದು, ಲಲಾಟದಲ್ಲಿ ಜಿನಬಿಂಬ ಕಂಬವನ್ನು ಕೆತ್ತಲಾಗಿದೆ.

ಇದರ ನವರಂಗದಲ್ಲಿ ನಾಲ್ಕು ಸ್ವತಂತ್ರ ಕಂಬಗಳಿದ್ದು ನಾಲ್ಕು ದೇವಕೋಷ್ಟಗಳಿವೆ. ಅವುಗಳಲ್ಲಿ ಪಾರ್ಶ್ವನಾಥ, ಪದ್ಮಾವತಿ ಹಾಗೂ ಇನ್ನಿತರ ತೀರ್ಥಂಕರರ ಶಿಲ್ಪಗಳಿವೆ. ಕೆಳಭಾಗದಲ್ಲಿ ಚೌಕಾಗಿದ್ದು, ಮೇಲ್ಭಾಗದಲ್ಲಿ ದುಂಡಾಗಿವೆ. ಜೊತೆಗೆ ವೃತ್ತಕಾರದ ಫಲಕಗಳನ್ನು ಹೊಂದಿವೆ. ಇವುಗಳ ಮೇಲೆ ಚೌಕಾಕರದ ಫಲಕ ಹಾಗೂ ಕೊನೆಯಲ್ಲಿ ಬೋದಿಗೆಗಳನ್ನು ಹೊಂದಿವೆ.

ಈ ಕಂಬಗಳು ಕಲ್ಯಾಣ ಚಾಲುಕ್ಯರ ಕಾಲದ ಲಕ್ಷಣಗಳಿಂದ ಕೂಡಿವೆ. ಬಹುಶಃ ಪ್ರಾಚೀನ ಜಿನಾಲಯವು ಹಾಳಾದ ನಂತರ ಅಳಿದುಳಿದ ಕಂಬಗಳು ಹೊಸ ಜಿನಾಲಯಕ್ಕೆ ಜೋಡಿಸಿರಬೇಕು. ದೇವಾಲಯದ ನವರಂಗದಲ್ಲಿ ನಾಲ್ಕು ದೇವಕೋಷ್ಠಗಳಿವೆ. ಅಲ್ಲಿ ಪಾರ್ಶ್ವನಾಥ, ಪದ್ಮಾವತಿ ಹಾಗೂ ಇನ್ನಿತರ ಶಿಲ್ಪಗಳಿವೆ. ಈ ದೇವಾಲಯಕ್ಕೆ ವಿಶಾಲವಾದ ಪ್ರಾಕಾರವಿದ್ದು, ದೇವಾಲಯದ ಎದುರಿಗಿರುವ ಪ್ರಾಕಾರದ ಗೋಡೆಯಲ್ಲಿ ಒಂದು ಸಣ್ಣ ಗೂಡಿದೆ. ಅದರಲ್ಲಿ ಕೆಂಪುಮರಳು ಶಿಲೆಯಲ್ಲಿ ನಿರ್ಮಾಣ ಮಾಡಿರುವ ವೃಷಭನಾಥನ ಶಿಲ್ಪವನ್ನಿಡಲಾಗಿದೆ. ಅಲ್ಲಿಯೇ ಇನ್ನೊಂದು ಶಿಲ್ಪವು ಸಹ ಇದ್ದು ಅದು ಒಡೆದು ಹೋಗಿದೆ. ಕಪ್ಪು ಬಳಪದ ಕಲ್ಲಿನಲ್ಲಿ ಮಾಡಿರುವ ಈ ಶಿಲ್ಪವು ವೃಷಭನಾಥ ತೀರ್ಥಂಕರರ ಬಿಂಬವನ್ನು ಹೊಂದಿದೆ.

## ೪.೩ ಪಾಚ್ಛಾಪುರದ ಕೋಟೆ :

ಬಾದ್‌ಶಾಹಪುರವು ಪಾಚ್ಛಾಪುರ ಎಂಬ ಹೆಸರಿಗೆ ಪರಿವರ್ತನೆಯಾಗಿದೆ. ಈ ಊರು ಪ್ರಾಚೀನ ಕಾಲದಿಂದಲೂ ಹೆಸರುವಾಸಿಯಾದ ಪ್ರದೇಶ. ಈ ಗ್ರಾಮವು ಮೊದಲು ಆಲೂರು ಎಂಬ ಹೆಸರಿನಿಂದ ಕರೆಯಲ್ಪಡುತ್ತಿತ್ತು ಗ್ರಾಮದೇವತೆಯಾದ ಆಲೂರವ್ವನ ಗುಡಿಯು ಹೊರಭಾಗದಲ್ಲಿ ಇದುವರೆಗೂ ಕಂಡುಬರುತ್ತದೆ. ಆಲೂರು ಎಂಬ ಹೆಸರಿನ ಪಂಡಿತ ನಿಷ್ಪತ್ತಿಯನ್ನು ಪಕ್ಕದಲ್ಲಿಯೇ ಹರಿಯುವ ನದಿಸೂಚಕವಾಗಿ ಅರ್ಥೈಸಿದ್ದಾರೆ. ನದಿಯನ್ನು ಹಾಲಿನ ಸೂಚಕವಾಗಿ ಬಳಸಲಾಗಿದೆ. ಹಾಲಿನಂತೆ ಹರಿಯುವ ನದಿಯ ದಂಡೆಯ ಮೇಲೆ ಇರುವ ಊರು ಆಲೂರಾಗಿ ನಂತರ ಮಧ್ಯಕಾಲೀನ ಪಾಚ್ಛಾ ಎಂಬ ಅಧಿಕಾರಿಯ ಹೆಸರಿನ ಮೂಲಕ ಬಾದ್‌ಶಾಹಪುರ, ಪಾಚ್ಛಾಪುರವಾಗಿ ರೂಪಾಂತರ ಹೊಂದಿರುವ ಮಾಹಿತಿ ಇದೆ. ಪಾಚ್ಛಾಪುರದಲ್ಲಿ ಬಿಜಾಪುರದ ಆದಿಲ್‌ಷಾಹಿ ಪಾಚ್ಛಾ ನಿರ್ಮಿಸಿದ ಕೋಟೆಯೊಂದಿದೆ. ಆದ್ದರಿಂದಲೇ ಊರಿಗೆ ಪಾಚ್ಛಾಪುರ ಎಂಬ ಹೆಸರು ಬಂದಿದೆ.[೧] ಉತ್ತರದ ದಿಬ್ಬದ ಪ್ರದೇಶದಲ್ಲಿರುವ ಕೋಟೆ ರಕ್ಷಣಾತ್ಮಕವಾದುದ್ದು. ಕೋಟೆಯ ಗೋಡೆಗಳು ಹಾಳಾಗಿವೆ, ಕಾವಲುಗೋಪುರ ಹಾಗೂ ಕೋಟೆಯ ಪ್ರವೇಶದ್ವಾರಗಳು ಮಾತ್ರ ನೋಡಲು ಸಿಗುತ್ತವೆ. ಪ್ರವೇಶದ್ವಾರವು ಎತ್ತರವಾಗಿದ್ದು, ಕಮಾನಿನಾಕೃತಿಯಲ್ಲಿ ನಿರ್ಮಾಣಗೊಂಡಿದೆ. ಬಾಗಿಲುವಾಡವು ಸರಳವಾಗಿದ್ದು, ಇಕ್ಕೆಲಗಳಲ್ಲಿರುವ ಪಟ್ಟಿಯ ಮೇಲೆ ಹುಲಿಗಳ ಚಿತ್ರಗಳಿವೆ. ಅದರ ಕೆಳಗೆ ಪುಷ್ಪಪಟ್ಟಿಕೆ ಹಾಗೂ ಇದರ ಕೆಳಗೆ ಸರಪಳಿಯಾಕಾರದ ಹಾಗೂ ಚೋಳಿನಾಕಾರದಂತೆಯೂ ಇರುವ ಕೆತ್ತನೆಯಿದೆ. ದಿಬ್ಬದ ಮೇಲ್ಭಾಗದಲ್ಲಿ ಬಹು ವಿಸ್ತಾರವಾದ ಪ್ರದೇಶದಲ್ಲಿ ಅಂದಿನ ಅರಮನೆಯ ಅವಶೇಷಗಳಿವೆ. ಇದಕ್ಕೆ ಹೊಂದಿಕೊಂಡಂತೆ ಸರಕಾರಿ ಶಾಲೆಯಿದ್ದು, ಅದರ ಆವರಣದಲ್ಲಿ ಹಲವಾರು ಪ್ರಾಚ್ಯಾವಶೇಷಗಳು ಇಂದಿಗೂ ಕಂಡುಬರುತ್ತವೆ.

## ೫. ಮಾನನೂರಿನ ದೇವಾಲಯ :

ಗೋಕಾಕ್‌ದಿಂದ ಪಶ್ಚಿಮದಲ್ಲಿ ಸುಮಾರು ೧೮ ಕಿ.ಮೀ. ದೂರದಲ್ಲಿರುವ ಪಶ್ಚಿಮದಲ್ಲಿರುವ ಈ ಊರು ಮಾರ್ಕಂಡೇಯ ನದಿ ತೀರದಲ್ಲಿದೆ. ಪ್ರಸಿದ್ಧವಾದ ಗೊಡಚಿನಮಲ್ಕಿ ಜಲಪಾತದಿಂದ ಮೂರು ಕಿ.ಮೀ. ದೂರದಲ್ಲಿರುವ ಈ ಪ್ರದೇಶ ಶಿಲಾಯುಗದ ಕಾಲದಿಂದಲೂ ಪ್ರಸಿದ್ಧವಾಗಿದೆ. ಊರಿನ ರಾಮಲಿಂಗಪ್ಪ ಎಂಬುವರ ಹೊಲದಲ್ಲಿ ರಾಷ್ಟ್ರಕೂಟರ ಕಾಲದ ದೇವಾಲಯವೊಂದಿದೆ. ಇದರ ಸುತ್ತಮುತ್ತಲಿನ ಜಮೀನಿನಲ್ಲಿಯೂ ಕೂಡ ಹಳೆಯ ಕಾಲದ ದೇವಾಲಯದ ಅವಶೇಷಗಳಿವೆ.

## ೫.೧ ಬಸವೇಶ್ವರ (ಮಹಾಲಿಂಗೇಶ್ವರ) ದೇವಾಲಯ :

ಊರಿನ ಪಶ್ಚಿಮದಲ್ಲಿರುವ ಹಳ್ಳದ ತೋಟದ ಹೊಲದಲ್ಲಿ ದೇವಾಲಯವಿದ್ದು, ಕೆಂಪು ಮರಳುಶಿಲೆಯಿಂದ ನಿರ್ಮಿಸಲ್ಪಟ್ಟಿದೆ. ಈ ದೇವಾಲಯವು ಪೂರ್ವಾಭಿಮುಖವಾಗಿದೆ. ಗರ್ಭಗೃಹ ಹಾಗೂ ಅಂತರಾಳಗಳನ್ನು ಮಾತ್ರ ಹೊಂದಿರುವ ದೇವಾಲಯದ ಮುಂಭಾಗದ ರಚನೆಗಳು ಸಂಪೂರ್ಣ ನಾಶವಾಗಿವೆ.

ಗರ್ಭಗೃಹವು ಚೌಕಾಕರವಾಗಿದ್ದು, ಮಧ್ಯದಲ್ಲಿ ಶಿವಲಿಂಗವಿದೆ. ಅಷ್ಟಕೋನದ ಛತ್ತು ಹಾಗೂ ಪದ್ಮದ ಅಲಂಕರಣೆಯಿದೆ. ಗರ್ಭಗೃಹದ ಬಾಗಿಲು ಸರಳವಾಗಿದ್ದು ದ್ವಾರದಲ್ಲಿ ಅರ್ಧಗಂಬಗಳನ್ನು ಎದ್ದು ಕಾಣುವಂತೆ ಕೆತ್ತಲಾಗಿದೆ. ಬಾಗಿಲುವಾಡದ ಮೇಲ್ಭಾಗದಲ್ಲಿ ಕಲ್ಲಿನ ಪಟ್ಟಿಕೆಯಿದ್ದು ಅದಕ್ಕೆ ನಾಸಿಯ ಅಲಂಕರಣೆಯನ್ನು ಮಾಡಲಾಗಿದೆ.

ಗರ್ಭಗೃಹಕ್ಕೆ ಹೊಂದಿಕೊಂಡತೆ ಅಂತರಾಳವಿದ್ದು, ಅದರ ಮೇಲ್ಛಾವಣೆಯು ಸಮತಟ್ಟಾಗಿದೆ. ಅಧಿಷ್ಠಾನವು ಸಂಪೂರ್ಣವಾಗಿ ಮಣ್ಣಿನಲ್ಲಿ ಹೂತು ಹೋಗಿರುವುದರಿಂದ ಅದರ ಮಾಹಿತಿಗಳು ಅಸ್ಪಷ್ಟ. ದೇವಾಲಯದ ಹೊರಗೋಡೆಯಲ್ಲಿ ಯಾವುದೇ ಭಿತ್ತಿಯ ರಚನೆಗಳಿಲ್ಲ. ಗೋಡೆಯನ್ನು ದೊಡ್ಡ ಒರಟಾದ ಕಲ್ಲುಚಪ್ಪಡಿಗಳನ್ನು ಜೋಡಿಸಿ ನಿರ್ಮಿಸಲಾಗಿದೆ. ದೇವಾಲಯದ ಶಿಖರವೂ ಸಂಪೂರ್ಣ ನಾಶವಾಗಿರುವುದರಿಂದ ಅದರ ಮಾಹಿತಿ ಅಸ್ಪಷ್ಟ. ದೇವಾಲಯದ ಮುಂಭಾಗ ಎಡಬದಿಯಲ್ಲಿ ಶಿವಪಾರ್ವತಿಯರ ನಿಂತ ಶಿಲ್ಪವಿದೆ.

## ೬. ಘೊಡಗೇರಿಯ ದೇವಾಲಯಗಳು :

ಘೊಡಗೇರಿ ಹುಕ್ಕೇರಿಯಿಂದ ಆಗ್ನೇಯಕ್ಕೆ ೧೦ ಕಿ.ಮೀ. ದೂರದಲ್ಲಿದೆ. ಘಟಪ್ರಭಾ ಹಾಗೂ ಹಿರಣ್ಯಕೇಶಿ ನದಿಗಳ ಸಂಗಮ ಈ ಗ್ರಾಮದ ದಕ್ಷಿಣ ಭಾಗದಲ್ಲಿದೆ. ಇಲ್ಲಿ ಜನವಸತಿ ಇರುವ ಕುರುಹುಗಳಿವೆ. ಶಿಲಾಯುಗದಿಂದ ಜನವಸತಿಯಿರುವ ಪ್ರಾಚೀನ ಕಾಲದ ಹಲವಾರು ದೇವಾಲಯಗಳಿವೆ. ಅವುಗಳಲ್ಲಿ ನೀಲಕಂಠ, ರಾಮಲಿಂಗೇಶ್ವರ, ಗಜಲಿಂಗೇಶ್ವರ ಹಾಗೂ ಪಾರ್ಶ್ವನಾಥ ಬಸದಿಗಳು ಪ್ರಮುಖವಾಗಿವೆ.

### ೬.೧ ನೀಲಕಂಠೇಶ್ವರ ದೇವಾಲಯ :

ಊರಿನ ಮಧ್ಯಭಾಗದಲ್ಲಿರುವ ಈ ದೇವಾಲಯವನ್ನು ಕೆಂಪುಮರಳು ಶಿಲೆಯಲ್ಲಿ ನಿರ್ಮಿಸಲಾಗಿದೆ. ಪೂರ್ವಾಭಿಮುಖವಾಗಿದೆ. ಗರ್ಭಗೃಹ, ಅಂತರಾಳ ಹಾಗೂ ನವರಂಗಗಳನ್ನು ಹೊಂದಿದೆ. ದ್ರಾವಿಡ ಮಾದರಿಯ ಶಿಖರವನ್ನು ಹೊಂದಿರುವ ಇದಕ್ಕೆ ಸುಣ್ಣವನ್ನು ಬಳಿಯಲಾಗಿದೆ.

ಗರ್ಭಗೃಹವು ಚೌಕಾಕಾರವಾಗಿದ್ದು, ಒಳಛತ್ತಿನಲ್ಲಿ ಅಷ್ಟಕೋನ ಅಲಂಕಾರವಿದೆ. ಅಲ್ಲಿ ಪದ್ಮದ ಕೆತ್ತನೆಯನ್ನು ರಚಿಸಲಾಗಿದೆ. ಗರ್ಭಗೃಹದಲ್ಲಿ ಲಿಂಗ ಹಾಗೂ ನಂದಿಯ ಶಿಲ್ಪಗಳಿವೆ. ಇವುಗಳು ನಿತ್ಯವೂ ಪೂಜಿಸಲ್ಪಡುತ್ತವೆ. ಗರ್ಭಗೃಹಕ್ಕೆ ಹೊಂದಿಕೊಂಡಂತೆ ಅಂತರಾಳವಿದೆ. ಇಲ್ಲಿ ಎರಡು ದುಂಡನೆಯ ಸ್ವತಂತ್ರ ಸ್ತಂಭಗಳಿವೆ. ಇದರ ಗೋಡೆಯ ಭಾಗದಲ್ಲಿ ಮುಂಚಾಚಿದ ಅರ್ಧಗಂಬಗಳಿವೆ. ಅಂತರಾಳದ ಮುಂಭಾಗದ ದ್ವಾರಬಂಧದಲ್ಲಿ ವಿಷ್ಣುವಿನ ವಿವಿಧ ಅವತಾರಗಳನ್ನು ಪ್ರತಿಬಿಂಬಿಸುವ ಶಿಲ್ಪಗಳನ್ನು ಕಂಡರಿಸಿದ್ದಾರೆ. ದೇವಾಲಯದ ದ್ವಾರಗಳು ಸರಳ ರಚನೆಯಿಂದ ಕೂಡಿವೆ. ಗರ್ಭಗೃಹ, ಅಂತರಾಳದಲ್ಲಿ ಅರ್ಧಗಂಬಗಳನ್ನು ರಚಿಸಿದ್ದಾರೆ. ಅಂತರಾಳದ ಲಾಲಾಟದಲ್ಲಿ ಬರಿದಾಗಿದೆ.

ಅಂತರಾಳಕ್ಕೆ ಹೊಂದಿಕೊಂಡಂತೆ ನವರಂಗವಿದೆ. ಅಲ್ಲಿ ನಾಲ್ಕು ಸ್ವತಂತ್ರ ಕಂಬಗಳಿವೆ. ಇವುಗಳ ನಡುವೆ ಸ್ವಲ್ಪ ಎತ್ತರವಾದ ಹಾಗಿರುವ ಕಟ್ಟೆಯಿದೆ. ನವರಂಗದ ಮೇಲ್ಛಾವಣಿಯಲ್ಲಿ ಪದ್ಮದ ಅಲಂಕರಣೆಯಿದೆ. ಅಂತರಾಳದಲ್ಲಿ ಎರಡು ಹಾಗೂ ನವರಂಗದಲ್ಲಿ ನಾಲ್ಕು ಸ್ವತಂತ್ರ ಕಂಬಗಳಿವೆ. ಅಂತರಾಳದ ಎರಡೂ ಸ್ತಂಭಗಳನ್ನು ದುಂಡಾಗಿ ಕೆತ್ತಲಾಗಿದೆ. ನವರಂಗದಲ್ಲಿನ ನಾಲ್ಕು ಕಂಬಗಳು ಕೂಡ ಕೆತ್ತನೆಯಿಂದ ಕೂಡಿದೆ. ಇವು ಕೆಳಭಾಗದಿಂದ ಮೇಲ್ಭಾಗದವರೆಗೆ ಅಷ್ಟಕೋನದ ರೀತಿಯಲ್ಲಿವೆ. ಅದರ ಮೇಲೆ ಶಿಲ್ಪಪಟ್ಟಿಕೆ ಹಾಗೂ ವೃತ್ತಾಕಾರದ ಫಲಕಗಳಿವೆ. ಇವುಗಳ ಮೇಲೆ ಚೌಕಾಕಾರದ ಫಲಕಗಳಿವೆ. ಅಂತ್ಯದಲ್ಲಿ ನಾಲ್ಕು ಕಡೆ ಹೊರಚಾಚಿದ ಬೋದಿಗೆಗಳಿವೆ. ಬೋದಿಗೆಗಳ ತುದಿಗೆ ಹಾಳೆಯನ್ನು ಸುರುಳಿ ಮಾಡಿರುವ ಹಾಗೆ ಕೆತ್ತನೆಯ ರಚನೆಗಳಿವೆ.

ದೇವಾಲಯದ ಅಧಿಷ್ಠಾನ ಅತ್ಯಂತ ಸರಳವಾಗಿದೆ. ಇಲ್ಲಿ ಉಪಾನ, ಜಗತಿ, ಕುಮುದ, ಗಳ, ಕಪೋತದ ಭಾಗಗಳಿದ್ದು, ಅದರ ಮೇಲೆ ಇನ್ನೊಂದು ಪಟ್ಟಿಕೆಯಿದೆ. ದೇವಾಲಯದ ಹೊರಭಿತ್ತಿಯು ಸರಳವಾಗಿದೆ. ಭಿತ್ತಿಯ ಮೇಲ್ಭಾಗದ ಪ್ರಸ್ತಕದಲ್ಲಿ ಕಪೋತ, ನಖರಪಟ್ಟಿ, ಕುಮುದ ಮತ್ತು ಗಳವನ್ನು ರಚಿಸಿಲಾಗಿದೆ. ಈ ನಖರಪಟ್ಟಿಯು ದೇವಾಲಯದ ಸುತ್ತಲೂ ಮುಂದುವರೆದಿದೆ. ದೇವಾಲಯಕ್ಕೆ ದ್ರಾವಿಡ ಮಾದರಿಯ ಶಿಖರವಿದೆ. ಆದರೆ ಅದರ ಅರ್ಧಭಾಗ ಬಿದ್ದುಹೋಗಿದೆ. ಅದರ ಸ್ತೂಪಿ, ಕಲಶದ ಭಾಗಗಳು ನಾಶವಾಗಿವೆ. ನವರಂಗದ ಮುಂಭಾಗದಲ್ಲಿ ಎರಡೂ ಕಡೆ ವೀರಗಲ್ಲುಗಳಿವೆ.

**೬.೨ ರಾಮಲಿಂಗೇಶ್ವರ ದೇವಾಲಯ :**

ಈ ದೇವಾಲಯವು ಊರಿನ ಮಧ್ಯಭಾಗದಲ್ಲಿದೆ. ಕೆಂಪುಮರಳು ಶಿಲೆಯಲ್ಲಿರುವ ಈ ದೇವಾಲಯ ಪೂರ್ವಾಭಿಮುಖವಾಗಿದೆ. ದೇವಾಲಯಕ್ಕೆ ಸಂಪೂರ್ಣವಾಗಿ ಸುಣ್ಣ ಬಳಿಯಲಾಗಿದ್ದು, ಇಲ್ಲಿ ಗರ್ಭಗೃಹ, ಅಂತರಾಳ ಮತ್ತು ನವರಂಗಗಳಿವೆ.

ಗರ್ಭಗೃಹವು ಚೌಕಾಕಾರವಾಗಿದ್ದು, ಅಷ್ಟಕೋನ ಹಾಗೂ ಪದ್ಮದ ಅಲಂಕರಣೆಯ ಒಳಛತ್ತನ್ನು ಹೊಂದಿದೆ. ಗರ್ಭಗೃಹದಲ್ಲಿ ಲಿಂಗವಿದ್ದು, ಅದರ ಹಿಂಭಾಗದ ಗೋಡೆಯಲ್ಲಿ ಕಟ್ಟೆಯನ್ನು ಕಟ್ಟಲಾಗಿದೆ. ಗರ್ಭಗೃಹಕ್ಕೆ ಹೊಂದಿಕೊಂಡಂತೆ ಅಂತರಾಳವಿದೆ. ಇದರ ಮಧ್ಯದಲ್ಲಿ ನಂದಿಯಿದೆ. ಅಂತರಾಳದ ಒಳಛತ್ತು ಅಷ್ಟಕೋನ ರಚನೆ ಹಾಗೂ ಪದ್ಮದ ಅಲಂಕರಣೆಯನ್ನು ಹೊಂದಿದೆ. ಅಂತರಾಳದ ಇಕ್ಕೆಲಗಳಲ್ಲಿ ಜಾಲಂಧರಗಳಿವೆ. ದೇವಾಲಯದ ಗರ್ಭಗೃಹದ ದ್ವಾರಗಳು ಸರಳವಾಗಿದ್ದು, ತ್ರಿಶಾಖ ಮಾದರಿಯಾಗಿವೆ. ದ್ವಾರದ ಇಕ್ಕೆಲಗಳಲ್ಲಿ ಅರ್ಧಗಂಬಗಳಿವೆ. ಲಲಾಟದಲ್ಲಿ ಗಣೇಶನ ಶಿಲ್ಪವಿದೆ. ಅಂತರಾಳದ ದ್ವಾರಬಂಧದ ಮೇಲ್ಭಾಗದಲ್ಲಿ ಪುಷ್ಪಪಟ್ಟಿಕೆಗಳನ್ನು ಕೆತ್ತಲಾಗಿದೆ.

ದೇವಾಲಯವು ವಿಶಾಲವಾದ ನವರಂಗವನ್ನು ಹೊಂದಿದೆ. ಮಧ್ಯದಲ್ಲಿ ನಾಲ್ಕು ಕಂಬಗಳಿವೆ. ನವರಂಗದ ಒಳಗೋಡೆಯಲ್ಲಿ ದೇವಕೋಷ್ಠಗಳಿದ್ದು, ಅವುಗಳಲ್ಲಿ ಬ್ರಹ್ಮ, ವಿಷ್ಣು, ಶಿವ, ಗಣೇಶ,

ಸೂರ್ಯ, ಸಪ್ತಮಾತೃಕೆಯರ ಹಾಗೂ ಇನ್ನಿತರ ದೇವತಾ ಶಿಲ್ಪಗಳನ್ನು ಇಟ್ಟಿದ್ದಾರೆ. ನವರಂಗದಲ್ಲಿ ನಾಲ್ಕು ಸ್ವತಂತ್ರ ಕಂಬಗಳಿವೆ. ಇವು ಕಲ್ಯಾಣ ಚಾಲುಕ್ಯರ ಮಾದರಿಯಲ್ಲಿದ್ದು, ಉಪಾನ, ನಾಶಿಪಟ್ಟಿ ಮತ್ತು ದಂಡಭಾಗದಲ್ಲಿ ವೃತ್ತಾಕಾರದ ಪಟ್ಟಿಕೆಗಳನ್ನು ಕೆತ್ತಲಾಗಿದೆ. ಇವು ಅಷ್ಟಕೋನ ಮಾದರಿಯಲ್ಲಿದ್ದು, ಅವುಗಳ ಮೇಲೆ ತಟ್ಟೆಯಾಕಾರದ ಫಲಕಗಳನ್ನು ಹೊಂದಿದೆ. ಮೇಲ್ಭಾಗದಲ್ಲಿ ಮುಂಚಾಚಿದ ಬೋಧಿಗೆಗಳಿವೆ. ನವರಂಗದಲ್ಲಿ ಗೋಡೆಯಲ್ಲಿನ ಅರ್ಧಗಂಬಗಳು ಕೂಡಾ ಕೆತ್ತನೆಯ ರಚನೆಯನ್ನು ಹೊಂದಿವೆ. ದಂಡಭಾಗದಲ್ಲಿ ಬಾದಾಮಾಕಾರದ ರಚನೆ ಹಾಗೂ ಬೋಧಿಗೆಗಳಿನ್ನು ಹೊಂದಿದೆ.

ದೇವಾಲಯದ ಅಧಿಷ್ಠಾನದ ಬಹುಭಾಗ ಮಣ್ಣಲ್ಲಿ ಹೂತಿದೆ. ಪ್ರತಿ, ತ್ರಿಪಟ್ಟಕುಮುದ, ಆಳವಾದ ಮತ್ತು ಅಗಲವಾದ ಗಳದಂತಹ ರಚನೆಯನ್ನು ಕಾಣಬಹುದಾಗಿದೆ. ದೇವಾಲಯದ ಹೊರಭಿತ್ತಿಯು ಸರಳವಾಗಿದ್ದು, ಅಲ್ಲಿ ಯಾವುದೇ ಕೆತ್ತನೆಯ ರಚನೆಗಳಿಲ್ಲ. ದೇವಾಲಯವು ಪಿರಾಮಿಡ್ಡಿನಾಕಾರದ ಶಿಖರವನ್ನು ಹೊಂದಿದ್ದು, ಅದು ಈ ಹಿಂದೆ ಫಂಸಾನಾ ಮಾದರಿಯ ಶಿಖರವನ್ನು ಹೊಂದಿರುವಂತಿದೆ. ಸಂಪೂರ್ಣವಾಗಿ ಜೀರ್ಣೋದ್ಧಾರ ಮಾಡಿದ್ದಾರೆ. ಶಿಖರದ ತಲಗಳಿಗೆ ನಾಸಿಗಳ ಅಲಂಕಾರವಿದೆ.

**೬೩. ಗಜಲಿಂಗೇಶ್ವರ ದೇವಾಲಯ :**

ಫೋಡಗೇರಿಯಲ್ಲಿರುವ ಹಳೆಯ ದೇವಾಲಯಗಳಲ್ಲಿ ಇದೂ ಒಂದು. ಆದರೆ ಇದನ್ನು ಸಂಪೂರ್ಣ ಜೀರ್ಣೋದ್ಧಾರ ಮಾಡಲಾಗಿದೆ. ಪೂರ್ವಾಭಿಮುಖವಾಗಿರುವ ಈ ದೇವಾಲಯದಲ್ಲಿ ಗರ್ಭಗೃಹ ಹಾಗೂ ಮುಖಮಂಟಪಗಳು ಮಾತ್ರ ಇವೆ. ದೇವಾಲಯಕ್ಕೆ ವಿಶಾಲವಾದ ಪ್ರಾಕಾರವಿದ್ದು, ಬಲ ಭಾಗದಲ್ಲಿ ಕೆಲವು ಮಾಸ್ತಿ ಹಾಗೂ ವೀರಗಲ್ಲು ಶಿಲ್ಪಗಳಿವೆ. ಗಜಲಿಂಗೇಶ್ವರ ಗುಡಿಯನ್ನು ಬೀರೇಶ್ವರ ಗುಡಿ ಎಂತಲೂ ಕರೆಯುವರು. ಇದರ ಗರ್ಭಗೃಹವು ಚೌಕಾಕಾರವಾಗಿದ್ದು, ಭುವನೇಶ್ವರಿಯಲ್ಲಿ ಕಮಲಪುಷ್ಪದ ಕೆತ್ತನೆ ಇದೆ. ಗರ್ಭಗೃಹದಲ್ಲಿ ಎರಡು ಸಾಲಿಗ್ರಾಮ ಶಿಲೆಗಳಿವೆ. ಇವುಗಳನ್ನು ನರಸಿಂಹ ಹಾಗೂ ವಿಷ್ಣು ಸಾಲಿಗ್ರಾಮಗಳೆಂದು ಕರೆಯುತ್ತಾರೆ. ಗರ್ಭಗೃಹದ ದ್ವಾರವು ಸರಳವಾಗಿದ್ದು, ಲಲಾಟದಲ್ಲಿ ಆನೆ ಮತ್ತು ಪದ್ಮಗಳ ಅಲಂಕರಣೆಯಿದೆ.

ದೇವಾಲಯಕ್ಕೆ ನವೀಕರಿಸಿದ ಮುಖಮಂಟಪವಿದೆ. ಅದರ ಛಾವಣಿ ಸಮತಟ್ಟಾಗಿದ್ದು, ಮುಖಮಂಟಪವನ್ನು ಹತ್ತಲು ಸೋಪಾನಗಳಿವೆ. ಮುಖಮಂಟಪದಲ್ಲಿ ದೇವಕೋಷ್ಠಗಳಿವೆ. ದೇವಾಲಯದ ಪ್ರಾಕಾರಕ್ಕೆ ವಿಶಾಲವಾದ ಪ್ರವೇಶದ್ವಾರವಿದೆ. ಮುಖಮಂಟಪದಲ್ಲಿ ಇತ್ತೀಚೆಗೆ ನಿರ್ಮಿಸಿದ ನಾಲ್ಕು ಸ್ವತಂತ್ರ ಕಂಬಗಳಿದ್ದು ಅವುಗಳಿಗೆ ಬಣ್ಣವನ್ನು ಬಳಿಯಲಾಗಿದೆ. ದೇವಾಲಯದ ಹೊರ ಭಿತ್ತಿಯು ಸರಳ ರಚನೆಯದು. ಹಿಂಭಾಗದ ಗೋಡೆಯ ಗೂಡಿನಲ್ಲಿ ಇತ್ತೀಚಿನ ಶಿವ ಮತ್ತು ಲಿಂಗದ ಶಿಲ್ಪಗಳಿವೆ. ದೇವಾಲಯಕ್ಕೆ ಇತ್ತೀಚೆಗೆ ನಿರ್ಮಿಸಿದ ಶಿಖರವಿದೆ. ದೇವಾಲಯಕ್ಕೆ ವಿಶಾಲವಾದ ಪ್ರಾಕಾರವಿದೆ. ಇದರಲ್ಲಿ ಬ್ರಹ್ಮದೇವರ ಗುಡಿಯಿದೆ. ಪ್ರಾಕಾರದ ಬಲಭಾಗದಲ್ಲಿ ಪ್ರಾಚೀನ ಕಾಲದ ಮಾಸ್ತಿ ಹಾಗೂ ವೀರಗಲ್ಲುಗಳಿವೆ.

## ೬.೪ ಪಾರ್ಶ್ವನಾಥ ಬಸದಿ :

ಘೊಡಗೇರಿಯ ಊರಿನ ಮಧ್ಯದಲ್ಲಿ ಜಿನಮಂದಿರವೊಂದಿದ್ದು, ಅದೇ ಪಾರ್ಶ್ವನಾಥ ಬಸದಿ. ಕೆಂಪುಮರಳು ಶಿಲೆಯಿಂದ ನಿರ್ಮಿಸಲ್ಪಟ್ಟ ಇದು ಉತ್ತರಾಭಿಮುಖವಾಗಿದೆ. ಬಹುತೇಕ ಭಾಗಗಳನ್ನು ಜೀರ್ಣೋದ್ಧಾರ ಮಾಡಲಾಗಿದೆ. ಇದು ಗರ್ಭಗೃಹ, ನವರಂಗ ಹಾಗೂ ಮುಖಮಂಟಪವನ್ನು ಹೊಂದಿದೆ.

ಚೌಕಾಕಾರವಾಗಿದ್ದು, ಮಧ್ಯದಲ್ಲಿ ಇತ್ತೀಚಿನ ಪಾರ್ಶ್ವನಾಥನ ಶಿಲ್ಪವಿದೆ. ಭುವನೇಶ್ವರಿ ಭಾಗದಲ್ಲಿ ಕಮಲಪುಷ್ಪದ ಅಲಂಕರಣೆ ಇದೆ. ಗರ್ಭಗೃಹಕ್ಕೆ ಹೊಂದಿಕೊಂಡಂತೆ ನವರಂಗವಿದೆ. ಇಲ್ಲಿ ನಾಲ್ಕು ಸ್ವತಂತ್ರ ಕಂಬಗಳು ಮತ್ತು ಗೋಡೆಗಳಲ್ಲಿ ದೇವಕೋಷ್ಠಗಳನ್ನು ಹೊಂದಿರುವುದು. ಗರ್ಭಗೃಹದ ಹಾಗೂ ಮಂಟಪಗಳ ಪ್ರವೇಶದ್ವಾರಗಳು ಸರಳ ರಚನೆಯನ್ನು ಹೊಂದಿವೆ. ದೇವಾಲಯಕ್ಕೆ ಸಂಪೂರ್ಣವಾಗಿ ಬಣ್ಣ ಬಳಿಯಲಾಗಿದ್ದು, ಭಿತ್ತಿ ಸರಳ ರಚನೆಯಿಂದ ಕೂಡಿದೆ. ದೇವಾಲಯದ ನವರಂಗದಲ್ಲಿ ೪ ಸ್ವತಂತ್ರ ಸ್ತಂಭಗಳಿದ್ದು, ಅವುಗಳ ಮಧ್ಯದಲ್ಲಿ ಸ್ವಲ್ಪ ಎತ್ತರವಾದ ವೇದಿಕೆಯಿದೆ. ಕಂಬಗಳು ಸರಳ ರಚನೆಯನ್ನು ಹೊಂದಿವೆ. ಇತ್ತೀಚೆಗೆ ನಿರ್ಮಿಸಿದ ಮುಖಮಂಟಪ ದೇವಾಲಯಕ್ಕಿದೆ. ದೇವಾಲಯಕ್ಕೆ ಶಿಖರವಿಲ್ಲ.

## ೭. ಗೋಕಾಕ್‌ನ ದೇವಾಲಯಗಳು :

ಘಟಪ್ರಭಾ ನದಿ ದಡದಲ್ಲಿರುವ ಗೋಕಾಕ್ ಬೆಳಗಾವಿ ಜಿಲ್ಲೆಯ ತಾಲೂಕುಗಳಲ್ಲಿ ಒಂದು. ಜಿಲ್ಲಾಕೇಂದ್ರವಾದ ಬೆಳಗಾವಿಯಿಂದ ಈಶಾನ್ಯಕ್ಕೆ ೬೮ ಕಿ.ಮೀ. ದೂರದಲ್ಲಿದೆ. ಈ ನಗರಕ್ಕೆ ಮೊದಲು ಗೋಕಾಗೆ ಎಂಬ ಹೆಸರಿರುವುದಾಗಿ ಮಾಹಿತಿಗಳಿವೆ. ಚಿಕ್ಕೋಡಿ ತಾಲೂಕಿನ ಕೆರೂರಿನ ಕ್ರಿ.ಶ. ೧೧೪೪ರ ಶಾಸನ[೩] ಹಾಗೂ ಬಾಗಲಕೋಟೆ ಜಿಲ್ಲೆಯ ಅರಸೀಬೀದಿ ಶಾಸನದಲ್ಲಿ[೧೪] ಈ ಕುರಿತು ಉಲ್ಲೇಖಗಳಿವೆ. ಗೋಕಾಗೆ ಎಂಬುವುದು ಬಹುಶಃ ನಿಸರ್ಗ ಸೂಚ್ಯಕವಾಗಿ ಬಂದಿರುವ ಹೆಸರಾಗಿದ್ದಿರಬಹುದು. ಗೋಕಾಕದ ಮಹಾಲಿಂಗೇಶ್ವರ ದೇವಾಲಯದಲ್ಲಿ ಒಂದು ಆಕಳು ಇದ್ದು ಅದರ ಮೇಲೆ ಪ್ರತಿದಿನ ಕಾಗೆಯೊಂದು ಬಂದು ಕುಳಿತುಕೊಳ್ಳುತ್ತಿತ್ತೆಂದು, ಈ ಗೋವು ಮತ್ತು ಕಾಗೆ ಹೆಸರಿನ ಮೂಲಕ ಈ ಊರಿಗೆ ಗೋಕಾಗೆ ಎಂದು ಹೆಸರು ಪಡೆದು ತದನಂತರ ಗೋಕಾಕ್ ಆಯಿತೆಂಬುದು ಸ್ಥಳೀಯರ ಅಭಿಪ್ರಾಯ. ವಿಜಯನಗರ ಹಾಗೂ ವಿಜಯನಗರೋತ್ತರ ಕಾಲದಲ್ಲಿ ಈ ಪಟ್ಟಣವು ಪ್ರಮುಖ ಹಾಗೂ ನಿರ್ಣಾಯಾತ್ಮಕ ಯುದ್ಧಗಳಿಗೆ ಹೆಸರುವಾಸಿಗಿರುವ ಘಟನೆಗಳು ದಾಖಲಾಗಿವೆ. ವ್ಯಾಪಾರ ಚಟುವಟಿಕೆಗಳ ಸ್ಥಳವಾದ ಇದನ್ನು ಕಲ್ಯಾಣದ ಚಾಲುಕ್ಯ ಅರಸಿ ಅಕ್ಕಾದೇವಿ ಆಕ್ರಮಿಸಿಕೊಂಡು ತನ್ನ ಪ್ರಭುತ್ವ ಸ್ಥಾಪಿಸಿರುವುದು ಈ ಸ್ಥಳದ ಇತಿಹಾಸದ ದೃಷ್ಟಿಯಿಂದ ಮಹತ್ವದ ವಿಚಾರ. ಪ್ರಾಚೀನ ಇತಿಹಾಸದ ದಾಖಲೆಗಳು ವಿರಳವಾಗಿದ್ದರು ಈ ಪಟ್ಟಣದಲ್ಲಿ ಸಿಗುವ ಸ್ಮಾರಕಾವಶೇಷಗಳು ನಮಗೆ ಪ್ರಾಚೀನ ಕಾಲದ ಚರಿತ್ರೆಯನ್ನು ಕಟ್ಟಿಕೊಡಲು ಸಹಾಯಕವಾಗಿವೆ. ಈ ಪಟ್ಟಣದಲ್ಲಿ ಕೆಲವು ಪ್ರಾಚೀನ ದೇವಾಲಯಗಳನ್ನು ಕಾಣಬಹುದಾಗಿದೆ. ಅವುಗಳಲ್ಲಿ ಮಹಾಲಿಂಗೇಶ್ವರ ದೇವಾಲಯ, ಪಾರ್ಶ್ವನಾಥ ಬಸದಿಗಳು ಪ್ರಮುಖವಾಗಿದ್ದು, ನಗರದಲ್ಲಿರುವ

ಹಾಗೂ ಪಾಯಸಾಗರ ಶಾಲೆಯ ಹಿಂದುಗಡೆಯಿರುವ ಗುಹೆಯಲ್ಲಿ ಜೈನಧರ್ಮಕ್ಕೆ ಸಂಬಂಧಿಸಿದ ಮೂರ್ತಿಶಿಲ್ಪಗಳಿವೆ.

## ೭.೧ ಮಹಾಲಿಂಗೇಶ್ವರ ದೇವಾಲಯ :

ಘಟಪ್ರಭಾ ನದಿಯ ಬಲದಂಡೆಯ ಮೇಲಿರುವ ದೇವಾಲಯವಿದು. ಪೂರ್ವಾಭಿಮುಖವಾಗಿದ್ದು, ಕೆಂಪುಮರಳುಗಲ್ಲಿನಿಂದ ನಿರ್ಮಿತವಾಗಿದೆ. ಸು. ೧೧.೧೨ನೆಯ ಶತಮಾನಕ್ಕೆ ಸೇರಿದ ಈ ದೇವಾಲಯ ಅಂದು ಪ್ರಸಿದ್ಧವಾದ ಘಟಿಕಾಸ್ಥಳವಾಗಿತ್ತೆಂದು ತಿಳಿದುಬರುತ್ತದೆ.[೪] ದೇವಾಲಯವು ಗರ್ಭಗೃಹ, ಅಂತರಾಳ, ಸಭಾಮಂಟಪ ಹಾಗೂ ಹೊಸದಾಗಿ ರಚಿಸಿರುವ ಕದಂಬನಾಗರ ಶೈಲಿಯ ಶಿಖರವನ್ನು ಹೊಂದಿದೆ. ದೇವಾಲಯದ ಪ್ರಮುಖ ಲಕ್ಷಣಗಳು ಹೀಗಿವೆ.

ದೇವಾಲಯದ ಗರ್ಭಗೃಹವು ಚೌಕಾಕಾರವಾಗಿದ್ದು, ಮಧ್ಯದಲ್ಲಿ ಲಿಂಗವಿದೆ. ಇದರ ಒಳಛತ್ತು ಅಷ್ಟಕೋನಾಕೃತಿಯಾಗಿದ್ದು, ಮಧ್ಯದಲ್ಲಿ ಪದ್ಮವನ್ನು ಹೊಂದಿದೆ. ಗರ್ಭಗೃಹದ ದ್ವಾರವು ಕೆತ್ತನೆಯಿಂದ ಕೂಡಿದ್ದು, ಪಂಚಶಾಖಾ ರೀತಿಯಲ್ಲಿದೆ. ಅದರಲ್ಲಿ ಬಳ್ಳಿ, ಮಣಿ, ಸ್ತಂಭ, ಬಳ್ಳಿ ಮತ್ತು ರತ್ನಶಾಖೆಯ ಅಲಂಕಾರವನ್ನು ಮಾಡಲಾಗಿದೆ. ಬಾಗಿಲುವಾಡದ ಕೆಳಭಾಗದಲ್ಲಿ ಸ್ತ್ರೀ ದೇವತೆಯ ಶಿಲ್ಪಗಳನ್ನು ಕಂಡರಿಸಲಾಗಿದೆ. ಲಲಾಟದಲ್ಲಿ ಗಣೇಶನ ಶಿಲ್ಪವಿದೆ. ಅಂತರಾಳದ ದ್ವಾರಕ್ಕೆ ತಾಮ್ರದ ಪಟ್ಟಿಯನ್ನು ಬಡಿಯಲಾಗಿದೆ. ದೇವಾಲಯದಲ್ಲಿ ಗರ್ಭಗೃಹಕ್ಕೆ ಹೊಂದಿಕೊಂಡಂತೆ ಅಂತರಾಳವಿದೆ. ಒಳಗೋಡೆಯ ಇಕ್ಕೆಲಗಳಲ್ಲಿ ದೇವಕೋಷ್ಠಗಳಿವೆ. ಇವುಗಳ ಮೇಲೆ ದ್ರಾವಿಡ ಶಿಖರಗಳ ಪ್ರತಿಕೃತಿಗಳಿವೆ. ಇದರಲ್ಲಿ ಗಣಪ ಮತ್ತು ಲಿಂಗಗಳನ್ನು ಪ್ರತಿಷ್ಠಾಪಿಸಿಲಾಗಿದೆ.

ದೇವಾಲಯದಲ್ಲಿನ ಸಭಾಮಂಟಪ ಜೀರ್ಣೋದ್ಧಾರವಾಗಿದೆ. ಮಧ್ಯದಲ್ಲಿ ನಾಲ್ಕು ಸ್ವತಂತ್ರ ಸ್ತಂಭಗಳಿವೆ. ಅವುಗಳ ಮಧ್ಯದಲ್ಲಿ ನಂದಿಯಿದೆ. ಸಭಾಮಂಟಪದಲ್ಲಿ ದೇವಕೋಷ್ಠಕಗಳಿವೆ. ಅವುಗಳಲ್ಲಿ ನಾಗ ಮತ್ತು ಗಣಪತಿ ಶಿಲ್ಪಗಳಿವೆ. ಸಭಾಮಂಟಪದಲ್ಲಿ ನಾಲ್ಕು ಸ್ವತಂತ್ರಸ್ತಂಭಗಳಿವೆ. ಮಧ್ಯದಲ್ಲಿ ನಂದಿಯಿದೆ. ಕಂಬಗಳ ಕಾಂಡ ಭಾಗದಲ್ಲಿ ವಿಶೇಷ ಕೆತ್ತನೆಗಳಿವೆ. ಕಂಬದಲ್ಲಿರುವ ಪಟ್ಟಿಕೆಗಳನ್ನು ವೃತ್ತಾಕಾರವಾಗಿ ಕಂಡಿರಿಸಿದ್ದಾರೆ. ಅದರ ಮೇಲಿನ ದಂಡಭಾಗದಲ್ಲಿ ತೂಗಾಡುವ ಹೂವನ್ನು ಹೊಂದಿರುವ ಕುಂಬಾಕೃತಿಗಳನ್ನು ರಚಿಸಲಾಗಿದೆ. ಉಳಿದ ಎರಡು ಕಂಬಗಳು ಸರಳವಾಗಿದ್ದು, ಸಾದಾ ಚಿತ್ರಪಟ್ಟಿಕೆಗಳನ್ನು ಹೊಂದಿವೆ. ಈ ಸ್ತಂಭಗಳು ಕಲ್ಯಾಣ ಚಾಲುಕ್ಯರ ಕಾಲದ ರಚನೆಗಳಾಗಿವೆ. ದೇವಾಲಯದ ಮೇಲ್ಭಾಗದಲ್ಲಿ ಇತ್ತೀಚೆಗೆ ನಿರ್ಮಿಸಿದ ಕದಂಬ ನಾಗರ ಶಿಖರವಿದ್ದು, ಅದು ಪಿರಾಮಿಡ್ಡಿನ ಮಾದರಿಯಂತಿದೆ.

### ಮೂರ್ತಿಶಿಲ್ಪಗಳು :

ಮೂರ್ತಿಶಿಲ್ಪದ ಕಲ್ಪನೆಗಳು ಭಾರತದಲ್ಲಿ ಸಿಂಧೂ ನದಿ ನಾಗರಿಕತೆಯಿಂದಲೂ ಕಂಡುಬರುತ್ತವೆ. ಪ್ರಾರಂಭದಲ್ಲಿ ರಚನೆಯಾಗಿರುವ ಗೂಳಿ, ಲಿಂಗ, ಪಶುಪತಿ ಶಿವ, ನೃತ್ಯ ಮಾಡುವ ಸ್ತ್ರೀ ಮುಂತಾದ

ಶಿಲ್ಪಗಳು ಎಂದೆಂದಿಗೂ ಅಧ್ಯಯನಗಳ ಚರ್ಚೆಯಲ್ಲಿ ಸ್ಥಾನವನ್ನು ಪಡೆದಿವೆ. ಕರ್ನಾಟಕದಲ್ಲಿಯೂ ಇಂತಹ ಮೂರ್ತಿಶಿಲ್ಪಗಳ ರಚನೆಯನ್ನು ಶಾತವಾಹನ ಮತ್ತು ಕದಂಬರ ಕಾಲದಲ್ಲಿ ಕೊಣ್ಣೂರು ಪರಿಸರದಲ್ಲಿ ಇಂತಹ ಹಲವಾರು ಮೂರ್ತಿಶಿಲ್ಪಗಳು ನಮಗೆ ಕಾಣಸಿಗುತ್ತವೆ. ಸಾಮಾನ್ಯವಾಗಿ ಮೂರ್ತಿಶಿಲ್ಪಗಳನ್ನು ದೇವಾಲಯದ ಗರ್ಭಗೃಹ, ನವರಂಗ, ದೇವಕೋಷ್ಟ, ಶಿಖರದ ಭಾಗ, ದೇವಾಲಯದ ಹೊರಭಾಗ ಹೀಗೆ ಹಲವು ಹತ್ತು ಕಡೆ ಪ್ರತಿಷ್ಠಾಪಿಸಿರುವುದು ಕಂಡುಬರುತ್ತದೆ. ಈ ಶಿಲ್ಪಗಳು ಪ್ರಾಣಿ, ಪಕ್ಷಿ, ಗಿಡಮರ ಹಾಗೂ ಬೇರೆ ಬೇರೆ ನಮೂನೆಯ ಶಿಲ್ಪಗಳನ್ನು ದೇವಾಲಯದ ಬೇರೆ ಬೇರೆ ಭಾಗಗಳಲ್ಲಿ ಹಾಗೂ ಬಿಡಿಬಿಡಿಯಾಗಿ ಶಿಲ್ಪಗಳನ್ನು ರಚನೆ ಮಾಡಲಾಗಿದೆ. ರಾಮಾಯಣ ಮತ್ತು ಮಹಾಭಾರತ ಹಾಗೂ ಇನ್ನಿತರ ಪೌರಾಣಿಕ ಕಥೆಗಳನ್ನು ನಿರೂಪಿಸುವ ಶಿಲ್ಪಗಳನ್ನು ಕೆತ್ತಲಾಗಿದೆ. ಲೌಕಿಕ ಮತ್ತು ಅಲೌಕಿಕ ಶಿಲ್ಪಗಳು ದೇವಾಲಯಗಳಲ್ಲಿ ಇರುತ್ತಿದ್ದವು. ಇದರಲ್ಲಿ ಶಿಲ್ಪಿಯ ಕೈಚಳಕವೇ ಪ್ರಧಾನಪಾತ್ರ ವಹಿಸುತ್ತಿತ್ತು. ಇಂತಹ ಶಿಲ್ಪಗಳನ್ನು ಕೆತ್ತುವ ಉದ್ದೇಶವಾದರೂ ಏನು? ಎಂಬ ಪ್ರಶ್ನೆ ನಮ್ಮ ಮುಂದೆ ಬರುತ್ತದೆ. ಸಾಮಾನ್ಯವಾಗಿ ದೇವಾಲಯದ ಗರ್ಭಗುಡಿಯಲ್ಲಿರುವ ಮೂಲದೇವತೆಗೆ ಸಂಬಂಧಿಸಿದಂತೆ ಉಪದೇವತೆಗಳನ್ನು ಕೆತ್ತುತ್ತಿದ್ದರು. ದೇವಾಲಯಕ್ಕೆ ಹೆಚ್ಚಿನ ಸೌಂದರ್ಯ ಬರಲಿ ಎಂಬ ಕಾರಣಕ್ಕೂ ಇಂತಹ ಮೂರ್ತಿಶಿಲ್ಪಗಳನ್ನು ರಚಿಸಿರುವುದುಂಟು. ಒಟ್ಟಿನಲ್ಲಿ ಲೌಕಿಕ ಹಾಗೂ ಅಲೌಕಿಕ ಶಿಲ್ಪಗಳನ್ನು ಕಂಡರಿಸಿ, ಆ ಮೂಲಕ ಅಂದಿನ ಧಾರ್ಮಿಕ ಮತ್ತು ಸಾಮಾಜಿಕ ಚಿತ್ರಣವನ್ನು ಪ್ರತಿಬಿಂಬಿಸುವ ಪ್ರಯತ್ನಗಳನ್ನು ಕಾಣುತ್ತೇವೆ. ಕೆಲವು ಶಿಲ್ಪಗಳು ಅಂದಿನ ಧಾರ್ಮಿಕತೆಯನ್ನು ಪ್ರತಿಬಿಂಬಿಸಿದರೂ ಮತ್ತೇ ಕೆಲವು ಶಿಲ್ಪಗಳು ಅಲೌಕಿಕ ಜೀವನದ ಮೌಲ್ಯಗಳನ್ನು ಸ್ಪಷ್ಟಪಡಿಸುತ್ತವೆ. ಅಂದಿನ ಕಾಲದ ಲಲಿತಕಲೆಗಳು ಇಂತಹ ಶಿಲ್ಪಗಳ ಮುಖಾಂತರ ನಮಗೆ ಮನವರಿಕೆಯಾಗಲು ಸಾಧ್ಯ.

ಇಂತಹ ನೂರಾರು ಶಿಲ್ಪಗಳು ಕೊಣ್ಣೂರು ಪರಿಸರದಲ್ಲಿ ದೊರಕಿವೆ. ಅವುಗಳನಲ್ಲಿ ಜೈನ, ಶೈವ, ವೈಷ್ಣವ, ವೀರಗಲ್ಲು, ಮಾಸ್ತಿಗಲ್ಲು ನಿಷದಿಗಲ್ಲುಗಳು ಹಾಗೂ ಶಾಸನಶಿಲ್ಪಗಳು ಪ್ರಮುಖವಾಗಿವೆ. ಇಂತಹ ಶಿಲ್ಪಗಳನ್ನು ಆಯುಧಗಳು, ಆಭರಣಗಳು, ವಸ್ತ್ರಾಲಂಕಾರ, ವಿವಿಧ ಮುದ್ರೆಗಳು, ವಿವಿಧ ಭಂಗಿಗಳು ಅವುಗಳಿಗೆ ಸಂಬಂಧಿಸಿದ ವಾಹನಗಳೆಂದು ಪರಿಗಣಿಸಲ್ಪಡುವ ಪ್ರಾಣಿ ಪಕ್ಷಿಗಳ ಶಿಲ್ಪಗಳನ್ನು ಮುಖ್ಯ ಶಿಲ್ಪಗಳ ಜೊತೆಗೆ ಕೆತ್ತಲಾಗಿದೆ.

ಕೊಣ್ಣೂರು ಪರಿಸರದಲ್ಲಿ ನಮಗೆ ದೊರೆತ ಶಿಲ್ಪಗಳಲ್ಲಿ ಗಣೇಶ, ಸೂರ್ಯ, ಶಿವ, ವಿಷ್ಣು, ಬ್ರಹ್ಮ, ಸಪ್ತಮಾತೃಕೆಯರು, ಸರಸ್ವತಿ, ಭೈರವ, ನಾಗಶಿಲ್ಪಗಳು, ಗಜಲಕ್ಷ್ಮಿ, ಮಹಿಷಾಸುರ ಮರ್ದಿನಿ ಹಾಗೂ ಜೈನಶಿಲ್ಪಗಳಾದ ಪಾರ್ಶ್ವನಾಥ, ವೃಷಭನಾಥ, ಧರಣೇಂದ್ರ, ಪದ್ಮಾವತಿ ಮುತಾದ ಮೂರ್ತಿಶಿಲ್ಪಗಳು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕಂಡುಬಂದಿವೆ. ಇದರ ಜೊತೆಗೆ ವೀರಗಲ್ಲು ಹಾಗೂ ಮಹಾಸತಿಗಲ್ಲುಗಳು ಲಭ್ಯವಾಗಿವೆ.

**ಗಣೇಶನ ಶಿಲ್ಪಗಳು ::**

ವಿವಿಧ ಭಂಗಿಯಲ್ಲಿರುವ ಗಣೇಶನ ಶಿಲ್ಪಗಳು ಕೊಣ್ಣೂರು ಪರಿಸರದಲ್ಲಿ ಲಭ್ಯವಾಗಿವೆ. ಅವನ್ನು ದೇವಾಲಯಗಳ ದೇವಕೋಷ್ಠ, ಅಂತರಾಳ, ನವರಂಗದಲ್ಲಿ, ಲಲಾಟ ಹಾಗೂ ಹೊರಭಿತ್ತಿ ಮತ್ತು ಬಿಡಿಬಿಡಿಯಾಗಿ ರಚನೆ ಮಾಡಿ ಇಡಲಾಗಿದೆ. ಕೊಣ್ಣೂರಿನ ಚಿಕಲೇಶ್ವರ ದೇವಾಲಯದ ಅಂತರಾಳದಲ್ಲಿ, ಇದೇ ಊರಿನಲ್ಲಿರುವ ಹನುಮಂತನ ದೇವಾಲಯದ ಬಲಬದಿಯ ಕೋಷ್ಠದಲ್ಲಿ, ಕುಂದರಗಿಯ ಬಸವಣ್ಣ ದೇವಾಲಯದ ಹೊರಭಾಗದಲ್ಲಿ, ಘೊಡಗೇರಿಯ, ರಾಮಲಿಂಗೇಶ್ವರ, ಪಾಚ್ಛಾಪುರದ ಮಲ್ಲಿಕಾರ್ಜುನ ದೇವಾಲಯದ ಸಭಾಮಂಟಪ, ಗೋಡಚಿನಮಲ್ಕಿ ಜಲಪಾತದ ಬಲಬದಿಯ ಶಿಲಾಗೋರಿಯಲ್ಲಿ ಹೀಗೆ ಹಲವು ಹತ್ತು ಕಡೆ ಗಣೇಶನ ಶಿಲ್ಪಗಳನ್ನು ಕಾಣುತ್ತೇವೆ. ಬಹುತೇಕ ಶಿಲ್ಪಗಳು ಸುಖಾಸೀನ ಭಂಗಿಯಲ್ಲಿವೆ. ಇದನ್ನು ವಿಶೇಷವಾಗಿ ಕಂಡರಿಸಲಾಗಿದ್ದು, ಗಣೇಶನ ಆಯುಧಗಳು ಆಭರಣಗಳನ್ನು ಕೆತ್ತಲಾಗಿದೆ. ಉದಾಹರಣೆಗೆ, ಚಿಕಲೇಶ್ವರ ದೇವಾಲಯದ ಅಂತರಾಳದಲ್ಲಿರುವ ಗಣಪನ ವಿಗ್ರಹ ಈ ಭಾಗದ ಶಿಲ್ಪಗಳಲ್ಲೇ ದೊಡ್ಡದೆನ್ನಬಹುದಾಗಿದೆ. ಶಿಲ್ಪದಲ್ಲಿ ನಾಲ್ಕು ಕೈಗಳಿದ್ದು, ಕೈಯಲ್ಲಿ ದಂತ, ಪರಶು, ಅಂಕುಶ ಹಾಗೂ ಮೋದಕಗಳನ್ನು ಕೆತ್ತಲಾಗಿದೆ. ಕಿರೀಟ ಮುಕುಟ, ಕಂಠಹಾರ, ಮಣಿಸರ, ಯಜ್ಞೋಪವೀತ, ನಾಗಲಂಧ, ಕೈಬಳೆ, ಕಾಲ್ಗಡ ಇತ್ಯಾದಿ ಆಭರಣಗಳನ್ನು ಸೂಕ್ಷ್ಮವಾಗಿ ಕೆತ್ತಲಾಗಿದೆ. ಸುಮಾರು ೧೩ನೇ ಶತಮಾನದೆನ್ನಬಹುದಾದ ಈ ಶಿಲ್ಪವನ್ನು ಕಪ್ಪುಶಿಲೆಯಿಂದ ಕೆತ್ತಲಾಗಿದೆ. ಘೊಡಗೇರಿಯ ರಾಮಲಿಂಗೇಶ್ವರ ದೇವಾಲಯದ ನವರಂಗದಲ್ಲಿ ಕೂಡಾ ಬಹು ಸೊಗಸಾದ ಅತ್ಯಂತ ನಾಜೂಕಿನ ಕೆತ್ತನೆಯನ್ನೊಳಗೊಂಡು ಗಣೇಶನ ಶಿಲ್ಪವನ್ನು ಕಾಣುತ್ತೇವೆ. ಕಿರೀಟ ಹಾಗೂ ಮೈಮೇಲಿನ ಆಭರಣಗಳು ನೈಜತೆಯ ಪ್ರತಿಬಿಂಬವಾಗಿವೆ. ಕಿರೀಟ ಮುಕುಟನಾದ ಗಣಪ, ಕಂಠಹಾರ, ಮಣಿಸರ, ಕೈಗಡಗ, ಕಾಲ್ಗಡಗ ಮುಂತಾದ ಆಭರಣ ಹಾಗೂ ಕೈಯಲ್ಲಿ ಪರಶು, ಅಂಕುಶ, ಅಕ್ಷಮಾಲಗಳನ್ನು ಸುಂದರವಾಗಿ ಚಿತ್ರಿಸಲಾಗಿದೆ.

**ಶಿವನ ಶಿಲ್ಪಗಳು ::**

ಕೊಣ್ಣೂರು ಪರಿಸರದಲ್ಲಿ ಶಿವನ ವಿವಿಧ ರೂಪಗಳನ್ನು ಪ್ರತಿಬಿಂಬಿಸುವ ಶಿಲ್ಪಗಳನ್ನು ಕಾಣುತ್ತೇವೆ. ಗೋಕಾಕ್ ಜಲಪಾತದ ದತ್ತಾತ್ರೇಯ ದೇವಾಲಯದ ಗರ್ಭಗೃಹ, ಅಲ್ಲಿನ ಕಾಡಸಿದ್ಧೇಶ್ವರ ದೇವಾಲಯದ ಹಿಂಭಾಗದ ಶಿವಪಾರ್ವತಿ ಶಿಲ್ಪ, ಘೊಡಗೇರಿಯ ರಾಮಲಿಂಗೇಶ್ವರ ದೇವಾಲಯದ ನವರಂಗದ ದೇವಕೋಷ್ಠದಲ್ಲಿರುವ ಶಿವಪಾರ್ವತಿಯರ ಶಿಲ್ಪ, ಮಾವನೂರಿನ ಈಶ್ವರ ಗುಡಿಯ ಮುಂಭಾಗದಲ್ಲಿನ ಶಿವಪಾರ್ವತಿಯ ಶಿಲ್ಪ, ಹಿಡಕಲ್ ಅಣೆಕಟ್ಟಿನ ನಿರೀಕ್ಷಣಾಮಂದಿರ ಆವರಣದಲ್ಲಿ ಕುಳಿತಿರುವ ಶಿವನ ಶಿಲ್ಪಗಳು ಪ್ರಮುಖವಾಗಿವೆ. ಗೋಕಾಕ್ ಜಲಪಾತದ ದತ್ತಾತ್ರೇಯ ದೇವಾಲಯದ ಅಂತರಾಳ ಹಾಗೂ ಘೊಡಗೇರಿಯ ರಾಮಲಿಂಗೇಶ್ವರ ದೇವಾಲಯದಲ್ಲಿಯ ಶಿವಪಾರ್ವತಿಯ (ಉಮಾಮಹೇಶ್ವರ) ಶಿಲ್ಪಗಳು ಸುಖಾಸೀನ ಭಂಗಿಯಲ್ಲಿದ್ದು ಆಕರ್ಷಣೀಯವಾಗಿವೆ. ಪಾರ್ವತಿ ಶಿವನ ಎಡತೊಡೆಯ ಮೇಲೆ ಆಸೀನಳಾಗಿದ್ದು, ಶಿವನ ಎಡಗೈ ಪಾರ್ವತಿಗೆ ಆಶ್ರಯವಾದಂತಿದೆ. ಅಕ್ಷಮಾಲಾ, ತ್ರಿಶೂಲ, ಢಮರು, ಫಲ, ಜಟೆ,

ಕರ್ಣಮಂಡಲ, ಕಂಠಹಾರ, ಮಣಿಸರ, ಯಜ್ಞೋಪವೀತ, ತೋಳ್ಬಂದಿ, ಕೈಗಡಗ, ಕಾಲ್ಗಡಗ ಮುಂತಾದ ಆಯುಧ ಹಾಗೂ ಆಭರಣಗಳು ಈ ಶಿಲ್ಪಗಳಲ್ಲಿ ರಚನೆಯಾಗಿವೆ. ದತ್ತಾತ್ರೇಯ ಮಂದಿರದಲ್ಲಿನ ಗರ್ಭಗೃಹದಲ್ಲಿನ ಶಿವನ ಶಿಲ್ಪ ತ್ರಿಮುಖಗಳನ್ನು ಹೊಂದಿದೆ. ಅದರಲ್ಲಿ ಮಧ್ಯದ್ದು ತತ್ಪುರುಷನ, ಬಲಭಾಗದ್ದು ಅಘೋರ ಹಾಗೂ ಎಡಪಾರ್ಶ್ವದ್ದು ವಾಮದೇವ ರೂಪವಾಗಿದೆ. ಮೂರ್ತಿಯು ಸವಕಳಿಯಾಗಿದೆ. ಇಂತಹ ಮೂರ್ತಿ ಈ ಭಾಗದಲ್ಲಿ ವಿಶೇಷವೆನ್ನಬಹುದು. ಈ ಮೂರ್ತಿಶಿಲ್ಪದಿಂದ ತಿಳಿಯುವ ಬಹುಮುಖ್ಯ ವಿಚಾರವೆಂದರೆ ನದಿದಂಡೆಯಲ್ಲಿರುವ ಕಲ್ಲುಬಂಡೆಗಳ ಆಶ್ರಯತಾಣದಲ್ಲಿ ನಾಥಪಂಥಿಗಳು, ಅಘೋರಿಗಳು ತಮ್ಮ ವಾಮಚಾರದ ಕರ್ಮಗಳನ್ನು ಮಾಡುತ್ತಿದ್ದರು ಎಂಬುದು. ಮಧ್ಯಕಾಲೀನ ಕರ್ನಾಟಕದಲ್ಲಿ ಆಚರಣೆಯಲ್ಲಿದ್ದ ನಾಥ ಅಣುಯಾಯಿಗಳು ಈ ಪ್ರದೇಶದಲ್ಲಿ ಇದ್ದಿರುವ ಸೂಚನೆಗಳು ಚರಿತ್ರೆಯ ಮುಖ್ಯ ಅಂಶಗಳಾಗಿವೆ. ಗೋಕಾಕ್ ಜಲಪಾತದ ಹತ್ತಿರದ ಕಾಡಸಿದ್ದೇಶ್ವರ ದೇವಾಲಯದ ಹಿಂಭಾಗ ಹಾಗೂ ಮಾವನೂರಿನ ಬಸವೇಶ್ವರ ದೇವಾಲಯದ ಮುಂಭಾಗದಲ್ಲಿ ನಿಂತ ಭಂಗಿಯಲ್ಲಿರುವ ಶಿವಪಾರ್ವತಿಯ ಶಿಲ್ಪಗಳಿವೆ. ಅವುಗಳಲ್ಲಿ ಢಮರು, ತ್ರಿಶೂಲ, ಕಿರೀಟ, ಸೊಂಟಪಟ್ಟಿ ಕಂಠಹಾರ, ಕಾಲ್ಗಡಗ, ವಸ್ತ್ರ, ತೋಳ್ಬಂದಿ ಮುಂತಾದವುಗಳನ್ನು ಅಂದವಾಗಿ ಕೆತ್ತಲಾಗಿದೆ. ಸೊಗಸಾಗಿವೆ. ಜಲಪಾತದ ಬಳಿಯ ಶಿಲ್ಪದಲ್ಲಿ ನಂದಿ, ಶಿವಪಾರ್ವತಿಯರ ಬಲಪಾರ್ಶ್ವದಲ್ಲಿದ್ದರೆ, ಮಾವನೂರಿನ ಶಿಲ್ಪದಲ್ಲಿ ನಂದಿ ಅವರ ಮಧ್ಯದಲ್ಲಿರುವಂತೆ ಕೆತ್ತಲಾಗಿದೆ.

ಹಿಡಕಲ್ ಅಣೆಕಟ್ಟಿನ ನಿರೀಕ್ಷಣಾಮಂದಿರದ ಆವರಣದಲ್ಲಿ ಕುಳಿತಿರುವ ಶಿವನ ಶಿಲ್ಪವಿದೆ. ಇದರಲ್ಲಿಯೂ ಢಮರು, ತ್ರಿಶೂಲ, ಕಿರೀಟ, ಕೈಗಡಗ, ಕಲ್ಗಡಗ, ಕಂಠಹಾರದಂತಹ ಅಂಶಗಳನ್ನು ಗಮನಿಸಬಹುದು. ವಿಶೇಷವೆಂದರೆ ಶಿವನ ಹಿಂಭಾಗದಲ್ಲಿ ಪ್ರಭಾವಳಿಯನ್ನು ಕಂಡರಿಸಲಾಗಿದೆ.

ಕುಂದರಗಿಯ ಸಂಗಮೇಶ್ವರ ದೇವಾಲಯದ ಸುಖನಾಸಿಯ ಎರಡೂ ಬದಿಯಲ್ಲಿ ಹಾಗೂ ಕೊಣ್ಣೂರಿನ ಚಿಕಲೇಶ್ವರ ದೇವಾಲಯದ ಸುಖನಾಸಿಯ ಮುಖಪಟ್ಟಿಯಲ್ಲಿ ಶಿವನ ಶಿಲ್ಪವನ್ನು ಕಂಡರಿಸಲಾಗಿದೆ. ಕುಳಿತಿರುವ ಭಂಗಿಯಲ್ಲಿರುವ ಈ ಶಿಲ್ಪಗಳು ಗುಡಿಯು ಶಿವನಿಗೆ ಸಂಬಂಧಿಸಿದ್ದು ಎಂಬುದನ್ನು ಪ್ರಾತಿನಿಧಿಕಗೊಳಿಸುವಂತೆ ಕಂಡುಬರುತ್ತವೆ.

**ಸೂರ್ಯನ ಶಿಲ್ಪಗಳು :**

ಕೊಣ್ಣೂರು ಪರಿಸರದಲ್ಲಿ ಸೂರ್ಯನ ಆರಾಧನೆಯಿತ್ತೆಂಬುದಕ್ಕೆ ಇಲ್ಲಿ ಸಿಕ್ಕಿರುವ ಶಿಲ್ಪಗಳೇ ಸಾಕ್ಷಿ. ಇಲ್ಲಿನ ಹೆಚ್ಚಿನ ದೇವಾಲಯಗಳಲ್ಲಿ ಸೂರ್ಯನ ಶಿಲ್ಪಗಳು ಕಂಡುಬರುವುದು ವಿಶೇಷವೆನ್ನಬಹುದು. ಗೋಕಾಕ್ ಜಲಪಾತದ ದತ್ತಾತ್ರೇಯ ಗುಡಿಯ ಗರ್ಭಗೃಹ, ಕಾಡಸಿದ್ದೇಶ್ವರ ದೇವಾಲಯದ ಅಂತರಾಳ, ಈಶ್ವರಲಿಂಗ ದೇವಾಲಯದ ಬಲದಿಯಲ್ಲಿರುವ ಶಿಲ್ಪ, ಘೊಡಗೇರಿಯ ರಾಮಲಿಂಗೇಶ್ವರ ದೇವಾಲಯದ ನವರಂಗದ ಕೋಷ್ಠದಲ್ಲಿನ ಶಿಲ್ಪ, ಗೊಡಚಿನಮಲ್ಕಿ ಜಲಪಾತದ ಬಲಬದಿಯಲ್ಲಿನ ಶಿಲಾಗೋರಿಯಲ್ಲಿನ ಶಿಲ್ಪಗಳು ಪ್ರಮುಖವಾಗಿವೆ. ಜಲಪಾತದ ಬಳಿಯ ದತ್ತಾತ್ರೇಯ ದೇವಸ್ಥಾನದ ಗರ್ಭಗೃಹದಲ್ಲಿ ನಿಂತಿರುವ

ಸೂರ್ಯನ ಶಿಲ್ಪವಿದೆ. ಈ ಶಿಲ್ಪದ ಎರಡೂ ಕೈಗಳಲ್ಲಿ ಪದ್ಮಗಳಿದ್ದು, ಕಿರೀಟ, ಕರ್ಣಮಂಡಲ, ಕಂಠಹಾರ, ಮಣಿಸರ, ಯಜ್ಞೋಪವೀತ, ಕಟಿವಸ್ತ್ರ, ಕೈಬಳೆ, ಕಾಲ್ಗಡಗಳನ್ನು ಕೆತ್ತಲಾಗಿದೆ. ಕೆಳಭಾಗದಲ್ಲಿ ಉಷಾ ಮತ್ತು ಪ್ರತ್ಯುಷ್ಯಯರನ್ನು ಕಂಡರಿಸಿದ್ದಾರೆ. ಕ್ರಿ.ಶ. ೧೦-೧೧ನೆಯ ಶತಮಾನದ ಕಾಲವಧಿಯಲ್ಲಿ ರಚನೆಯಾಗಿರಬಹುದು. ಕೆಂಪುಮರಳು ಶಿಲೆಯಿಂದ ರಚಿಸಲಾಗಿದೆ. ಶಿಲ್ಪದ ಹಿಂದೆ ಮಕರ ತೋರಣದ ಪ್ರಭಾವಳಿಯಿದ್ದು, ಅದು ಬಹಳಷ್ಟು ಸವೆದಿದೆ. ಜಲಪಾತದ ಬಳಿಯ ಕಾಡಸಿದ್ಧೇಶ್ವರ ದೇವಾಲಯದ ಅಂತರಾಳದ ಗೋಡೆಯಲ್ಲಿ ಈಶ್ವರಲಿಂಗ ದೇವಾಲಯದ ಬಲಭಾಗದಲ್ಲಿ ಇಂತಹದ್ದೇ ಶಿಲ್ಪಗಳಿವೆ. ಘೋಡಗೇರಿಯ ರಾಮಲಿಂಗೇಶ್ವರ ದೇವಾಲಯದಲ್ಲಿನ ಶಿಲ್ಪವನ್ನು ಕಪ್ಪುಕಲ್ಲಿನಿಂದ ಮಾಡಲಾಗಿದ್ದು, ಶಿಲ್ಪ ಸಮಭಂಗಿಯಲ್ಲಿದ್ದು ನಿಂತಿರುವ ಸೂರ್ಯನ ಚಿತ್ರವು ಸ್ಪಷ್ಟವಾಗಿದೆ. ಕೈಯಲ್ಲಿ ಕಮಲಗಳಿದ್ದು, ಕಿರೀಟಧಾರಿಯಾಗಿದ್ದಾನೆ. ಕಂಠಹಾರ, ಕೈಗಡಗ, ಕಾಲ್ಗಡಗ, ಕಟಿವಸ್ತ್ರ, ಯಜ್ಞೋಪವೀತ ಮುಂತಾದ ಅಲಂಕರಣೆಗಳನ್ನು ಮಾಡಲಾಗಿದೆ. ಶಿಲ್ಪದ ಕೆಳಗೆ ಹಾಗೂ ಮೇಲ್ಭಾಗದಲ್ಲಿ ಉಪದೇವತೆಗಳ ಚಿಕ್ಕಶಿಲ್ಪಗಳನ್ನು ಕಂಡರಿಸಿದ್ದಾರೆ. ಪ್ರಮುಖ ಉಪದೇವತೆಗಳಾದ ಉಷೆ ಹಾಗೂ ಪ್ರತ್ಯುಷೈಯರನ್ನು ಮೇಲ್ಭಾಗದಲ್ಲಿ ಚಿತ್ರಿಸಿದ್ದಾರೆ. ಪೀಠಭಾಗದಲ್ಲಿ ರಥವನ್ನು ಎಳೆಯುತ್ತಿರುವ ಅಶ್ವಗಳನ್ನು ಸಾಲಾಗಿ ಕೆತ್ತಲಾಗಿದೆ.

### ನಾಗ ಮತ್ತು ನಾಗದೇವತೆಯ ಶಿಲ್ಪಗಳು :

ಈ ಪರಿಸರದಲ್ಲಿ ನಾಗದೇವತೆಯ ಆರಾಧನೆಯೂ ಇದ್ದುದ್ದು, ಶಿಲ್ಪಗಳಿಂದ ಅರಿಯಬಹುದಾದ ಅಂಶ. ಪ್ರತಿಯೊಂದು ದೇವಾಲಯಗಳಲ್ಲಿ ನಾಗಶಿಲ್ಪ ಇರುವುದು ವಿಶೇಷ. ಆದರೆ ಕೆಲವು ಕಡೆ ನಾಗದೇವ ದೇವತೆಗಳ ಅರ್ಧಭಾಗ ಮನುಷ್ಯ, ಕೆಳಭಾಗ ನಾಗ ಶಿಲ್ಪಗಳನ್ನು ಕಾಣಬಹುದಾಗಿದೆ. ಕುಂದರಿಗಿಯ ಸಂಗಮೇಶ್ವರ ದೇವಾಲಯದ ಎದುರಿಗೆ, ಗೋಕಾಕ ಜಲಪಾತದ ಬಳಿಯು ಈಶ್ವರಲಿಂಗ ದೇವಾಲಯ, ಅರಭಾವಿಯ ದುರುದುಂಡೇಶ್ವರ ದೇವಾಲಯದ ಪ್ರಾಕಾರದಲ್ಲಿನ ನಂದಿಸ್ತಂಭ, ಕುಂದರಿಗಿಯ ಬಸವಣ್ಣ ದೇವಾಲಯದ ಹೊರಭಾಗದಲ್ಲಿ ಹಿಡಕಲ್ ಅಣೆಕಟ್ಟಿನ ನಿರೀಕ್ಷಣಾಮಂದಿರದ ಆವರಣದಲ್ಲಿ ನಾಗಶಿಲ್ಪ ಹಾಗೂ ನಾಗದೇವತೆಯ ಶಿಲ್ಪಗಳನ್ನು ಕಾಣಬಹುದಾಗಿದೆ. ಗೋಕಾಕ್ ಜಲಪಾತದ ಬಳಿಯಿರುವ ಈಶ್ವರಲಿಂಗ ದೇವಾಲಯದ ಬಳಿ ನಾಗಶಿಲ್ಪಗಳಿದ್ದು, ಅವುಗಳಲ್ಲಿ ಎರಡು ಶಿಲ್ಪಗಳಲ್ಲಿ ಐದು ಹೆಡೆಯನ್ನು ಬಿಚ್ಚಿದ ನಾಗಶಿಲ್ಪವಿದೆ. ಕೆಂಪುಶಿಲೆಯಲ್ಲಿರುವ ಈ ಶಿಲ್ಪ ಪೂರ್ಣ ಸರ್ಪರೂಪದಲ್ಲಿದೆ. ಕುಂದರಿಗಿಯ ಬಸವಣ್ಣ ದೇವಾಲಯದ ಹೊರಭಾಗದಲ್ಲಿ ಏಳು ಹೆಡೆಯನ್ನು ಹೊಂದಿರುವ ನಾಗಶಿಲ್ಪವಿದೆ. ಕಪ್ಪುಶಿಲೆಯಲ್ಲಿ ಕಂಡರಿಸಲಾಗಿದೆ. ದುರುದುಂಡೇಶ್ವರ ಮಠದ ಆವರಣದಲ್ಲಿ ನಾಗವನ್ನು ಪೂಜಿಸುತ್ತಿರುವ ದಂಪತಿಗಳ ಶಿಲ್ಪವಿದೆ. ಸರ್ಪದ ಎಡ ಮತ್ತು ಬಲಪಾರ್ಶದಲ್ಲಿ ನಿಂತು ಪೂಜೆ ಮಾಡುತ್ತಿರುವ ದೃಶ್ಯವಿದೆ. ಘೋಡಗೇರಿಯಲ್ಲಿನ ರಾಮಲಿಂಗೇಶ್ವರದ ದೇವಾಲಯದಲ್ಲಿ ನಾಗದೇವತೆಯ ಶಿಲ್ಪವೊಂದಿದ್ದು, ಅದನ್ನು ಕಪ್ಪುಶಿಲೆಯಲ್ಲಿ ಕೆತ್ತಲಾಗಿದೆ. ಮೇಲ್ಭಾಗದಲ್ಲಿ ಪುರುಷ ಹಾಗೂ ಸ್ತ್ರೀಯರ ಆಕೃತಿಗಳು ಕೆಳಭಾಗದಲ್ಲಿ ಸರ್ಪದ ರಚನೆಯಿದೆ. ಪುರುಷ ಭಾಗದ ಶಿಲ್ಪದ ಹಿಂದೆ ಹೆಡೆಬಿಚ್ಚಿದ ಸರ್ಪದ ಬಿಂಬವಿದೆ. ಸ್ತ್ರೀಯ

ಶಿಲ್ಪದ ಹಿಂಭಾಗದಲ್ಲಿ ತಲೆಯ ಮೇಲೆ ಹೆಡೆಬಿಚ್ಚಿದ ಸರ್ಪವಿದ್ದು, ಅದರ ಮೇಲ್ಭಾಗದಲ್ಲಿ ಛತ್ರವಿದೆ. ಈ ಶಿಲ್ಪಗಳಿಗೆ ಪ್ರಭಾವಳಿಯಿದೆ. ಪುರುಷ ಹಾಗೂ ಸ್ತ್ರೀ ಶಿಲ್ಪಗಳು ಕಿರೀಟಧಾರಿಗಳಾಗಿದ್ದು, ಪುರುಷನ ಬಲಗೈಯಲ್ಲಿ ಖಡ್ಗವಿದೆ. ಇಬ್ಬರೂ ಕಂಠಹಾರ, ಕೈಬಳೆ, ತೋಳ್ಬಂದಿ, ಕಾಲ್ಗಡಗಗಳನ್ನು ಧರಿಸಿರುವರು. ಇದೇ ರೀತಿಯಾದ ಶಿಲ್ಪವನ್ನು ಕುಂದರಗಿಯಲ್ಲಿಯೂ ಕಾಣುತ್ತೇವೆ. ಹಿಡ್ಕಲ್ ಅಣೆಕಟ್ಟಿನ ಪ್ರವಾಸಿಮಂದಿರದ ಆವರಣದಲ್ಲಿಯೂ ಮನುಷ್ಯ ಹಾಗೂ ಸರ್ಪದ ಭಾಗಗಳನ್ನು ಹೊಂದಿರುವ ಕಪ್ಪುಶಿಲೆಯಲ್ಲಿರುವ ನಾಗದೇವತೆಯ ಶಿಲ್ಪವಿದೆ.

**ಭೈರವನ ಶಿಲ್ಪಗಳು :**

ಕೊಣ್ಣೂರು ಪರಿಸರದಲ್ಲಿ ಭೈರವನ ಕೆಲ ಶಿಲ್ಪಗಳು ಲಭ್ಯವಾಗಿವೆ. ಇದರಿಂದ ಆ ಪಂಥದ ಅನುಯಾಯಿಗಳು ಈ ನಾಡಿನಲ್ಲಿ ಇದ್ದಿರಬಹುದೆಂದು ತಿಳಿಯಬಹುದಾಗಿದೆ. ಹಿಡಕಲ್ ಜಲಾಶಯದ ಪರಿವೀಕ್ಷಣಾ ಮಂದಿರದಲ್ಲಿ ನಿಂತಿರುವ ಭೈರವ ಶಿಲ್ಪವಿದೆ. ಅಂಕಸಗಿಯ ಲಕ್ಷ್ಮೀದೇವರ ಗುಡಿಯ ಎದುರಿಗೆ ಇಂತಹದ್ದೆ ಶಿಲ್ಪವಿದೆ. ಭೈರವನ ಕೈಯಲ್ಲಿ ತ್ರಿಶೂಲ, ಢಮರು, ಖಡ್ಗ, ಪಾನಬಟ್ಟಲು ಹಾಗೂ ರುಂಡಗಳಿವೆ. ಕಿರೀಟದ ಹಾಗೆ ಬಟ್ಟೆಯನ್ನು ಅಲಂಕರಿಸಲಾಗಿದೆ. ಕರ್ಣಕುಂಡಲ, ಕಂಠಹಾರ, ಯಜ್ಞೋಪವೀತ, ರುಂಡಮಾಲೆ, ಕಾಲ್ಗಗಡ, ಕೈಬಳೆಗಳನ್ನು ಕಾಣಬಹುದು. ಅಂಕಲಗಿಯ ಶಿಲ್ಪದಲ್ಲಿ ಉಪದೇವತೆಯಾದ ಭೂತಶಿಲ್ಪ ಪಾರ್ಶ್ವದಲ್ಲಿದೆ. ನಾಯಿಯೊಂದು ಜಿಗಿದು ರುಂಡದಿಂದ ಬೀಳುತ್ತಿರುವ ನೆತ್ತರನ್ನು ನೆಕ್ಕುವಂತಿದೆ. ಸುಮಾರು ೧೨ನೆಯ ಶತಮಾನದಲ್ಲಿನ ಈ ಶಿಲ್ಪಗಳನ್ನು ಕಪ್ಪುಶಿಲೆಯಲ್ಲಿ ಕೆತ್ತಲಾಗಿದೆ. ಗೋಕಾಕ್ ಜಲಪಾತದ ಬಳಿಯ ಮಹಾಲಿಂಗೇಶ್ವರ ದೇವಾಲಯದ ಶಿಖರದ ಹೊರಭಾಗದಲ್ಲಿ ಕಾಲಭೈರವನ ಶಿಲ್ಪವಿದೆ.

**ಸಪ್ತಮಾತೃಕೆಯರ ಶಿಲ್ಪಗಳು :**

ಪೌರಾಣಿಕ ಪ್ರಾಮುಖ್ಯತೆ ಪಡೆದ ಸಪ್ತಮಾತೃಕೆಯರ ಶಿಲ್ಪಗಳು ಕೊಣ್ಣೂರು ಪರಿಸರದಲ್ಲಿ ಕಾಣಸಿಗುತ್ತವೆ. ಬ್ರಹ್ಮಾಣಿ, ಮಹೇಶ್ವರಿ, ಕೌಮಾರಿ, ವೈಷ್ಣವಿ, ವರಾಹಿ, ಇಂದ್ರಾಣಿ, ಕಾಳಿ ಅಥವಾ ಚಾಮುಂಡಿಯ ಶಿಲ್ಪಗಳಿವೆ. ಕುಂದರಗಿಯ ಸಂಗಮೇಶ್ವರ ದೇವಾಲಯದ ಮುಂಭಾಗದ ಬಲಪಾರ್ಶ್ವದಲ್ಲಿ ಹಾಗೂ ಘೋಡಗೇರಿಯ ರಾಮಲಿಂಗೇಶ್ವರ ದೇವಾಲಯದ ನವರಂಗದ ಕೋಷ್ಠದಲ್ಲಿದೆ. ಕಪ್ಪುಶಿಲ್ಪದಿಂದ ಕೆತ್ತಲ್ಪಟ್ಟಿರುವ ಈ ಶಿಲ್ಪಗಳು ಸವ್ಯಲಲಿತಾಸನದಲ್ಲಿವೆ. ಸಂಗಮೇಶ್ವರ ದೇವಾಲಯದ ಶಿಲ್ಪ ಪೂರ್ಣಪ್ರಮಾಣದಲ್ಲಿದ್ದರೂ, ಸುಣ್ಣಬಳಿದಿರುವುದರಿಂದ ಸ್ಪಷ್ಟವಾಗಿ ಕಾಣುವುದಿಲ್ಲ. ಸಪ್ತಮಾತೃಕೆಯರ ತಲೆಯ ಮೇಲೆ ಛತ್ರಿಯಿರುವುದು ವಿಶೇಷವೆನ್ನಬಹುದು. ಆಯಾ ದೇವತೆಗಳ ಕೆಳಗೆ ವೃಷಭ, ಹಂಸ, ನವಿಲು, ಗರುಡ, ವರಾಹ, ಆನೆ, ನರಿ, ಮೂಷಕಗಳನ್ನು ಚಿತ್ರಿಸಲಾಗಿದೆ. ಪಕ್ಕದಲ್ಲಿ ಸರಸ್ವತಿ ಹಾಗೂ ಗಣೇಶನ ಶಿಲ್ಪಗಳಿವೆ. ಘೋಡಗೇರಿಯಲ್ಲಿನ ಸಪ್ತಮಾತೃಕೆಯರ ಶಿಲ್ಪ ಭಗ್ನಗೊಂಡರೂ ಸ್ಪಷ್ಟತೆಯನ್ನು ಪಡೆದಿದೆ.

## ಗಜಲಕ್ಷ್ಮಿ ಶಿಲ್ಪಗಳು :

ಕೊಣ್ಣೂರು ಪರಿಸರದಲ್ಲಿ ಗಜಲಕ್ಷ್ಮಿ ಶಿಲ್ಪಗಳು ದೊರಕಿವೆ. ಮುಖ್ಯವಾಗಿ ಮಾವನೂರಿನ ಹೊಲದಲ್ಲಿ, ಕೊಣ್ಣೂರಿನ ಪಾರ್ಶ್ವನಾಥ ಬಸದಿಯ ಪಾದಗಟ್ಟೆಯ ಹತ್ತಿರ ಹಾಗೂ ಗೋಕಾಕ್ ಜಲಪಾತದ ಬಳಿಯಿರುವ ಕಾಡಸಿದ್ದೇಶ್ವರ ದೇವಾಲಯದ ಲಲಾಟಪಟ್ಟೆಯಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪಗಳಿವೆ. ದತ್ತಾತ್ರೇಯ ಗುಡಿಯ ಗರ್ಭಗೃಹದ ಮಂಗಲ ಫಲಕದಲ್ಲಿ ಭಗ್ನಗೊಂಡ ಇಂತಹ ಶಿಲ್ಪವೊಂದಿದೆ. ಮಾವನೂರಿನ ಪಶ್ಚಿಮ ಭಾಗದ ಹೊಲವೊಂದರಲ್ಲಿ ಗಜಲಕ್ಷ್ಮಿ ಶಿಲ್ಪವಿದ್ದು, ಅದನ್ನು ಕಪ್ಪುಶಿಲೆಯಲ್ಲಿ ಕೆತ್ತಲಾಗಿದೆ. ಮಧ್ಯದಲ್ಲಿ ಲಕ್ಷ್ಮಿಯು ಅರೆಪದ್ಮಾಸನದಲ್ಲಿ ಕುಳಿತಿದ್ದು, ಇಕ್ಕೆಲಗಳಲ್ಲಿ ಎರಡು ಆನೆಗಳು ಸೊಂಡಿಲಿನಿಂದ ಅಭಿಷೇಕ ಮಾಡುವಂತೆ ಚಿತ್ರಿಸಲಾಗಿದೆ. ಇಂತಹದ್ದೇ ಶಿಲ್ಪ ಕೊಣ್ಣೂರಿನ ಪಾರ್ಶ್ವನಾಥ ಬಸದಿಯ ಪಾದಗಟ್ಟೆಯ ಹತ್ತಿರವೂ ಇದ್ದು, ಕೆಂಪು ಮರಳುಶಿಲೆಯಿಂದ ನಿರ್ಮಿತಗೊಂಡಿದೆ. ಗಜಲಕ್ಷ್ಮಿ ಅನುಗ್ರಹ ದೇವತೆಯಾಗಿದೆ. ಸಂಬಂಧಿಸಿದ ಅನೇಕ ಪುರಾಣ ಕತೆಗಳಿರುವುದು ತಿಳಿದಿರುವ ಸಂಗತಿಯಾಗಿದೆ.

## ಬ್ರಹ್ಮನ ಶಿಲ್ಪ :

ಕೊಣ್ಣೂರಿನ ಭಾಗದಲ್ಲಿ ಕೆಲವು ಬ್ರಹ್ಮನ ಶಿಲಾಫಲಕಗಳೂ ದೊರಕಿವೆ. ಘೊಡಗೇರಿಯ ಶ್ರೀ ರಾಮಲಿಂಗೇಶ್ವರ ದೇವಾಲಯದ ನವರಂಗದಲ್ಲಿ ಬ್ರಹ್ಮನ ಶಿಲ್ಪವಿದೆ. ಬ್ರಹ್ಮ ಮೂರು ಮುಖದವನಾಗಿದ್ದು, ಕಪ್ಪು ಶಿಲೆಯಲ್ಲಿ ಕೆತ್ತಲ್ಪಟ್ಟಿದೆ. ಕಿರೀಟಧಾರಿಯಾದ ಶಿಲ್ಪದಲ್ಲಿ ಕೈಯಲ್ಲಿ ಫಲವಿದೆ. ಕಂಠಾಭರಣ, ಕೈಗಡ, ಕಾಲ್ಗಡಗ, ಯಜ್ಞೋಪವೀತ ಹಾಗೂ ವಸ್ತ್ರಗಳನ್ನು ಧರಿಸಿದ್ದಾರೆ.

## ವಿಷ್ಣು ಶಿಲ್ಪಗಳು :

ಕೊಣ್ಣೂರು ಪರಿಸರದಲ್ಲಿ ವಿಷ್ಣುವಿನ ಆರಾಧನೆಯಿತ್ತೆಂಬುದಕ್ಕೆ ಇಲ್ಲಿ ಸಿಕ್ಕ ಶಿಲ್ಪಗಳೇ ಸಾಕ್ಷಿ, ವಿಷ್ಣುವಿನ ಶಿಲ್ಪಗಳನ್ನು ದೇವಾಲಯದ ದೇವಕೋಷ್ಠಗಳಲ್ಲಿ, ಶಿಖರಗಳಲ್ಲಿ ಹೀಗೆ ಮುಂತಾದ ಕಡೆ ಕಂಡರಿಸಲಾಗಿದೆ. ಘೊಡಗೇರಿಯ ರಾಮಲಿಂಗೇಶ್ವರ ದೇವಾಲಯದಲ್ಲಿನ ನವರಂಗದ ದೇವಕೋಷ್ಠದಲ್ಲಿದೆ. ಕಪ್ಪುಛಾಯೆಯಲ್ಲಿರುವ ಈ ಶಿಲ್ಪವು ವಿಷ್ಣು ಸಮಪಾದ ಭಂಗಿಯಲ್ಲಿದ್ದಾನೆ. ಕಿರೀಟಧಾರಿ ಹಾಗೂ ವಸ್ತ್ರಧಾರಿಯಾದ ವಿಷ್ಣುವಿನ ಮೈಮೇಲೆ ಕರ್ಣಮಂಡಲ, ಕಂಠಹಾರ, ಮಣಿಸರ, ಯಜ್ಞೋಪವೀತ, ಕೈಗಡಗ, ಕಾಲ್ಗಡಗ, ಬೆರಳುಂಗುರಗಳಿವೆ. ವಿಷ್ಣುವಿನ ಒಂದು ಎಡಗೈ ಭಗ್ನಗೊಂಡಿದ್ದು, ಉಳಿದ ಕೈಗಳಲ್ಲಿ ಶಂಖ, ಚಕ್ರ ಮತ್ತು ಪದ್ಮಗಳಿವೆ. ವಿಷ್ಣುವಿನ ಹಿಂಭಾಗದಲ್ಲಿ ಪ್ರಭಾವಳಿಯಿದೆ. ಕೆಳಭಾಗದಲ್ಲಿ ಉಪದೇವತೆಗಳಾದ ಶ್ರೀದೇವಿ ಹಾಗೂ ಭೂದೇವಿಯರನ್ನು ಕಂಡರಿಸಿದ್ದಾರೆ. ವಿಷ್ಣುವಿನ ಅನ್ಯ ಶಿಲ್ಪಗಳು ಕುಂದರಗಿಯ ಸಂಗಮೇಶ್ವರ ದೇವಾಲಯದ ಪಶ್ಚಿಮಾಭಿಮುಖವಾಗಿರುವ ಶಿಖರದಲ್ಲಿ ಹಾಗೂ ಗೋಕಾಕ್ ಜಲಪಾತದ ಮಹಾಲಿಂಗೇಶ್ವರ ದೇವಾಲಯದ ಶಿಖರದ ಭಾಗದಲ್ಲಿಯೂ ನೋಡಬಹುದಾಗಿದೆ. ಘೊಡಗೇರಿಯ ನೀಲಕಂಠೇಶ್ವರ ದೇವಾಲಯದ ಅಂತರಾಳದ ದ್ವಾರಬಂಧ ಹಾಗೂ ನವರಂಗದ

ಅಡ್ಡತೊಲೆಗಳ ಮೇಲೆ ವಿಷ್ಣುವಿನ ವಿವಿಧ ಅವತಾರಗಳನ್ನು ಪ್ರತಿಬಿಂಬಿಸುವಂತಹ ಶಿಲ್ಪಗಳನ್ನು ಕಂಡರಿಸಲಾಗಿದೆ.

**ಸರಸ್ವತಿ ಶಿಲ್ಪಗಳು :**

ಕುಂದರಗಿಯ ಸಂಗಮೇಶ್ವರ ದೇವಾಲಯದ ಮುಂಭಾಗದ ಎಡ ಪಾರ್ಶ್ವದಲ್ಲಿ ಸರಸ್ವತಿಯ ಶಿಲ್ಪವಿದೆ. ಕಪ್ಪುಶಿಲೆಯಿಂದ ಕೆತ್ತಲ್ಪಟ್ಟ ಈ ಶಿಲ್ಪ ಪದ್ಮಾಸನದಲ್ಲಿದೆ. ಕೈಯಲ್ಲಿ ಅಕ್ಷಮಾಲ, ಪಾಶ, ಪುಸ್ತಕಗಳಿವೆ. ಕಿರೀಟ ಮುಕುಟವಾಗಿದ್ದು, ಕರ್ಣಮಂಡಲ, ಕಂಠಹಾರ, ಮಣಿಸರ, ಕೈಬಳೆಗಳನ್ನು ಹೊಂದಿದ್ದು, ಹಿಂಭಾಗದಲ್ಲಿ ಸವೆದಿರುವ ಪ್ರಭಾವಳಿಯಿದೆ. ಶಿಲ್ಪಕ್ಕೆ ಸುಣ್ಣ ಬಳಿದಿರುವುದರಿಂದ ಹೆಚ್ಚಿನ ವಿವರಗಳು ಅಲಭ್ಯ.

**ಮಹಿಷಾಸುರಮರ್ದಿನಿ ಶಿಲ್ಪ :**

ಕೊಣ್ಣೂರು ಪರಿಸರದಲ್ಲಿ ಕೆಲವು ಶಕ್ತಿದೇವತೆಗಳ ಶಿಲ್ಪವೂ ದೊರಕಿದ್ದು, ಅವುಗಳಿಂದ ಈ ಭಾಗದಲ್ಲಿ ಶಕ್ತಿದೇವತೆಗಳ ಆರಾಧನೆಯಿತ್ತೆಂಬುದು ತಿಳಿದುಬರುತ್ತದೆ. ಕುಂದರಗಿಯ ಲಕ್ಷ್ಮೀದೇವಾಲಯದ ಎದುರಿಗೆ ಮಹಿಷಮರ್ದಿನಿ ಶಿಲ್ಪವಿದೆ. ಶಿಲ್ಪವು ಕಪ್ಪುಛಾಯೆ ಹೊಂದಿದ್ದು, ಭಗ್ನಗೊಂಡಿದೆ. ಹೆಚ್ಚಿನ ಮಾಹಿತಿಗಳು ಅಲಭ್ಯವಾಗಿವೆ. ಜಲಪಾತದ ಬದಿಯ ದತ್ತಾತ್ರೇಯ ದೇವಾಲಯದ ಅಂತರಾಳದ ಛತ್ತಿನಲ್ಲಿ ನೃತ್ಯ ಮಾಡುತ್ತಿರುವ ಚಾಮುಂಡಿಯ ಶಿಲ್ಪವಿದೆ. ಗೋಕಾಕ ಜಲಪಾತದ ಹತ್ತಿರದ ಕಾಡಸಿದ್ದೇಶ್ವರ ದೇವಾಲಯದ ದಕ್ಷಿಣಾಭಿಮುಖದ ಶಿಖರದ ಮುಂಭಾಗದಲ್ಲಿ ದೊಡ್ಡದಾದ ಭೈರವಿಯ ಶಿಲ್ಪವಿದೆ.

**ಬ್ರಹ್ಮಯತಿ :**

ಜಲಪಾತದ ಬಳಿಯಿರುವ ಈಶ್ವರ ದೇವಾಲಯದ ಬಲಬದಿಯಲ್ಲಿ ಒಂದು ವಿಶೇಷ ಶಿಲ್ಪವಿದೆ. ಕೆಂಪು ಮರಳುಶಿಲೆಯ ಈ ಶಿಲ್ಪ ಪದ್ಮಾಸನದಲ್ಲಿದೆ. ಇದು ನಮಸ್ಕಾರ ಮುದ್ರೆಯಲ್ಲಿದ್ದು, ತಲೆಯ ಮೇಲೆ ವಿಶಿಷ್ಟ ರೀತಿಯ ಜಟೆಯನ್ನು ಕೆತ್ತಲಾಗಿದೆ. ಕೈಗಳು ಅಂಜಲಿಮುದ್ರೆಯಲ್ಲಿದ್ದು, ಪಕ್ಕದಲ್ಲಿ ಕಮಂಡಲವಿದೆ. ಮಣಿಸರ, ಕಂಠಹಾರ, ಕರ್ಣಮಂಡಲ, ಕೈಗಡಗದಂತಹ ಆಭರಣಗಳಿವೆ. ಸು.೧೨ನೆಯ ಶತಮಾನದ ಕಾಲದ್ದಾಗಿರಬಹುದಾದ ಇದು ಪಾಶುಪತ ಅಥವಾ ಕಾಳಮುಖ ಪಂಡಿತನ ಶಿಲ್ಪವಾಗಿರಬಹುದು.

**ನಂದಿವಿಗ್ರಹಗಳು :**

ಈ ಭಾಗದಲ್ಲಿ ಬಹುತೇಕ ದೇವಾಲಯಗಳು ಶೈವ ದೇವಾಲಯಗಳಾಗಿವೆ. ಶಿವನ ವಾಹನ ನಂದಿಯನ್ನು ದೇವಾಲಯದಲ್ಲಿ ಪ್ರತಿಷ್ಠಾಪಿಸಿರುವುದು ಸಾಮಾನ್ಯ. ಕೆಲವು ನಂದಿಗಳು ನವರಂಗದಲ್ಲಿ ಅಂತರಾಳದಲ್ಲಿ ಮತ್ತೆ ಕೆಲವು ಗರ್ಭಗುಡಿಯಲ್ಲಿವೆ. ಇವೆಲ್ಲ ಚಿಕ್ಕಗಾತ್ರದ ಶಿಲ್ಪಗಳು. ಆದರೆ ಗೋಕಾಕ್ ಜಲಪಾತದ ಬಳಿಯಿರುವ ಈಶ್ವರಲಿಂಗ ದೇವಾಲಯದ ಬಲಬದಿಯಲ್ಲಿರುವ ನಂದಿ ಶಿಲ್ಪ ದೊಡ್ಡಗಾತ್ರದ್ದು,

ಸುಮಾರು ೩.೫ ಅಡಿ ಎತ್ತರವಿರುವ ಇದನ್ನು ಅಪೂರ್ಣಗೊಳಿಸಿದಂತಿದೆ. ಕೆಂಪು-ಕಪ್ಪು ಮಿಶ್ರಿತ ಈ ಶಿಲ್ಪದ ಕೊರಳಲ್ಲಿ ಗಂಟೆಯ ಸರ ಮತ್ತು ಸರಪಳಿಯಾಕಾರದ ಆಭರಣಗಳಿವೆ. ಕೊಂಬುಗಳು ಚಿಕ್ಕದಾಗಿವೆ. ಅರಭಾವಿಯ ತ್ರಿಕೂಟಾಚಲ ಬಸವೇಶ್ವರ ದೇವಾಲಯದಲ್ಲಿ ನಂದಿಯ ಶಿಲ್ಪದಿದ್ದು, ವಿಶೇಷವಾಗಿದೆ. ನಂದಿಯ ಮುಂಭಾಗದಲ್ಲಿ ಕಾಲುಚಾಚಿದಂತಿದ್ದು, ಅದರ ಮಧ್ಯದಲ್ಲಿ ಶಿವಲಿಂಗವನ್ನು ರಚನೆ ಮಾಡಲಾಗಿದೆ. ಇದಕ್ಕೆ ಹಣೆಪಟ್ಟಿ ಹಾಗೂ ಕೊರಳ ಹಾರಗಳಿವೆ.

**ಸ್ತ್ರೀ ಶಿಲ್ಪ :**

ಒಂದು ಸ್ತ್ರೀ ಶಿಲ್ಪ ಅರಭಾವಿಯ ತ್ರಿಕೂಟಾಚಲ ಬಸವೇಶ್ವರ ದೇವಾಲಯದ ಅಂತರಾಳದ ದೇವಕೋಷ್ಠದಲ್ಲಿದೆ. ಕುಳಿತಿರುವ ಭಂಗಿಯಲ್ಲಿರುವ ಇದನ್ನು ಕಪ್ಪುಶಿಲೆಯಿಂದ ಕೆತ್ತಲಾಗಿದೆ. ಕೈಬಳೆ, ಕಂಠಹಾರ, ತೋಲ್ಬಂದಿಗಳಂತಹ ಆಭರಣಗಳನ್ನು ಹೊಂದಿದ್ದು, ಕೈಯಲ್ಲಿ ಫಲವನ್ನು ಹಿಡಿದಿರುವಂತಿದೆ. ಶಿಲ್ಪದ ಹಿಂಭಾಗದಲ್ಲಿ ಪ್ರಭಾವಳಿಯ ರಚನೆಯಿದೆ. ಸ್ಥಳೀಯರು ಅದಕ್ಕೆ ನೀಲಾಂಬಿಕಾ ಶಿಲ್ಪವೆಂದು ಕರೆಯುವರು. ಇದೊಂದು ವಿಶೇಷ ಶಿಲ್ಪವಾಗಿ ಪರಿಗಣಿಸಲ್ಪಟ್ಟಿರುವುದು.

**ಕೊಣ್ಣೂರು ಪರಿಸರದ ಜೈನಶಿಲ್ಪಗಳು :**

ಕೊಣ್ಣೂರು ಪರಿಸರದಲ್ಲಿ ಜೈನ ಧರ್ಮವು ಕ್ರಿ.ಪೂ. ೩ನೆಯ ಶತಮಾನದಲ್ಲಿ ಅಸ್ತಿತ್ವದಲ್ಲಿತ್ತೆಂದು ಸ್ಥಳೀಯ ಐತಿಹ್ಯಗಳಿಂದ ತಿಳಿದುಬರುವ ವಿಷಯ. ಈ ಸಂಗತಿಯನ್ನು ಈಗಾಗಲೇ ಚರ್ಚಿಸಲಾಗಿದೆ. ಈ ಭಾಗದ ಹಲವಾರು ಪ್ರದೇಶಗಳಲ್ಲಿ ಜಿನಾಲಯಗಳಿದ್ದು, ಅವು ಪ್ರಾಚೀನ ಕಾಲದ ಜೈನಧರ್ಮದ ಪ್ರಸಾರಕ್ಕೆ ಸಾಕ್ಷಿಯಾಗಿವೆ. ಕೊಣ್ಣೂರು, ಗೋಕಾಕ್, ಘೋಡಗೇರಿ, ಪಾಚ್ಛಾಪೂರಗಳಲ್ಲಿ ಪ್ರಾಚೀನ ಕಾಲದ ಜಿನಮಂದಿರಗಳು ಹಾಗೂ ಜೈನ ಶಿಲ್ಪಗಳಿವೆ. ಪಾರ್ಶ್ವನಾಥ, ಆದಿನಾಥ, ಪದ್ಮಾವತಿ ಹಾಗೂ ಧರಣೇಂದ್ರ ಶಿಲ್ಪಗಳು ಲಭ್ಯವಾಗಿವೆ.

**ಪಾರ್ಶ್ವನಾಥನ ಶಿಲ್ಪ :**

ಜೈನ ತೀರ್ಥಂಕರರಲ್ಲೊಬ್ಬರಾದ ಪಾರ್ಶ್ವನಾಥನ ಶಿಲ್ಪಗಳು ಕೊಣ್ಣೂರು, ಗೋಕಾಕ್, ಘೋಡಗೇರಿ ಹಾಗೂ ಪಾಚ್ಛಾಪೂರದಲ್ಲಿವೆ. ಕೊಣ್ಣೂರಿನ ಪಾರ್ಶ್ವನಾಥ ಬಸದಿಯ ಅಂತರಾಳದಲ್ಲಿ ಸಮಪಾದ ಭಂಗಿಯಲ್ಲಿರುವ ಪಾರ್ಶ್ವನಾಥನ ವಿಗ್ರಹವಿದ್ದು, ಕಪ್ಪು ಶಿಲೆಯಿಂದ ಮಾಡಲ್ಪಟ್ಟಿದೆ. ಶಿಲ್ಪದ ಹಿಂಭಾಗದಲ್ಲಿ ಏಳುಹೆಡೆಯ ಸರ್ಪವಿದ್ದು, ಅದರ ಮೇಲೆ ಛತ್ರಿಯಿದೆ. ಕೆಳಭಾಗದಲ್ಲಿ ಎರಡೂ ಬದಿಯಲ್ಲಿ ಧರಣೇಂದ್ರ ಯಕ್ಷ ಹಾಗೂ ಪದ್ಮಾವತಿ ಯಕ್ಷಿಣಿಯರನ್ನು ಕಂಡರಿಸಲಾಗಿದೆ. ಪ್ರಭಾವಳಿಯಲ್ಲಿ ಸ್ತಂಭಾಕೃತಿಯ ರಚನೆಯಿದ್ದು, ಮಕರಣ ತೋರಣವಿದೆ. ಪ್ರಭಾವಳಿ ಹಾಗೂ ಪೀಠದ ಮೇಲಿರುವ ಶಾಸನದ ಪ್ರಕಾರ ಈ ವಿಗ್ರಹವನ್ನು ಶ್ರೀ ಕುಮಾರ ಸೇನ ದೇವರ ಶಿಷ್ಯರಾದ ಮೂಲಸಂಘದ ನಾಗಸೇನ ದೇವರು ಮಾಡಿಸಿರುವರು ಎಂಬ ಉಲ್ಲೇಖವಿದೆ.

ಗೋಕಾಕದ ಪಾಯಸಾಗರ ಶಾಲೆಯ ಹಿಂಭಾಗದಲ್ಲಿರುವ ಗುಹಾಲಯದಲ್ಲಿ ಇದೇ ರೀತಿಯ ಶಿಲ್ಪವಿದೆ. ಈ ಶಿಲ್ಪವು ಸಹ ಸಮಪಾದ ಭಂಗಿಯಲ್ಲಿದ್ದು, ಕಪ್ಪುಶಿಲೆಯಲ್ಲಿ ರಚನೆಯಾಗಿದೆ. ಪಾರ್ಶ್ವನಾಥನ ಹಿಂಭಾಗದಲ್ಲಿ ಏಳು ಹೆಡೆಯನ್ನು ಬಿಚ್ಚಿದ ಸರ್ಪವಿದೆ. ಪ್ರಭಾಮಂಡಲವನ್ನು ಕೆತ್ತಲಾಗಿದೆ. ಇದರ ಮೇಲ್ಭಾಗದಲ್ಲಿ ಛತ್ರವಿದೆ. ಮಕರತೋರಣವು ಪ್ರಭಾವಳಿಯಲ್ಲಿದ್ದು, ಕೆಳಭಾಗದಲ್ಲಿ ಯಕ್ಷ ಯಕ್ಷಿಣಿಯರಾದ ಧರಣೇಂದ್ರ ಹಾಗೂ ಪದ್ಮಾವತಿಯರು ಲಲಿತಾಸನದಲ್ಲಿ ಕುಳಿತಿರುವಂತಿದೆ. ಇದು ಸುಮಾರು ೧೨ನೆಯ ಶತಮಾನದ್ದು.

ಪಾಚ್ಛಾಪುರದಲ್ಲಿನ ಬಸದಿಯಲ್ಲಿರುವ ಪಾರ್ಶ್ವನಾಥ ಜಿನಮೂರ್ತಿ ಕೂಡ ಆಕರ್ಷಕವಾಗಿದೆ. ಕಪ್ಪು ಛಾಯೆಯ ಕಲ್ಲಿನಲ್ಲಿ ಇದನ್ನು ಕೆತ್ತಲಾಗಿದೆ. ಸಮಭಂಗಿಯಲ್ಲಿ ನಿಂತಿದೆ. ಹಿಂಭಾಗದಲ್ಲಿ ಛತ್ರಿ ಆಕಾರದಂತಿರುವ ಹಾವಿನ ಹೆಡೆಯ ರಚನೆಯಿದೆ. ಬಳ್ಳಿಯಾಕಾರದ ಪ್ರಭಾವಳಿಯೂ ಇದಕ್ಕಿದೆ. ಪೀಠಭಾಗವು ಚೌಕಾಕಾರವಾಗಿದ್ದು, ಅಲ್ಲಿ ಕಮಲಪುಷ್ಪವನ್ನು ಕೆತ್ತಲಾಗಿದೆ. ಕೆಳಭಾಗದ ಇಕ್ಕೆಲಗಳಲ್ಲಿ ಧರಣೇಂದ್ರ ಮತ್ತು ಪದ್ಮಾವತಿ ಯಕ್ಷ ಯಕ್ಷಿಣಿಯರ ಶಿಲ್ಪಗಳಿವೆ. ಪೀಠಭಾಗದಲ್ಲಿರುವ ಶಾಸನದ ಪ್ರಕಾರ ಈ ವಿಗ್ರಹವನ್ನು ಕ್ರಿ.ಶ. ೧೬೭೭ರಲ್ಲಿ ಪ್ರತಿಷ್ಠಾಪಿಸಲಾಗಿದೆ. ಪ್ರಭಾವಳಿಯ ಇಕ್ಕೆಲಗಳಲ್ಲಿ ಬೇರೆ ಬೇರೆ ತೀರ್ಥಂಕರರು ಕುಳಿತ ಚಿಕಣಿ ಶಿಲ್ಪಗಳನ್ನು ಕಂಡರಿಸಿದ್ದಾರೆ. ಪೀಠಭಾಗದಲ್ಲಿ ವೃಷಭನಾಥನ ಲಾಂಛನವಾದ ವೃಷಭವನ್ನು ಕೆತ್ತಿದ್ದಾರೆ.

ಪಾಚ್ಛಾಪುರದಲ್ಲಿರುವ ಪಾರ್ಶ್ವನಾಥನ ಬಸದಿಯ ಸುತ್ತ ವಿಶಾಲವಾದ ಪ್ರಕಾರವಿದೆ. ಬಸದಿಯ ಎದುರಿಗಿರುವ ಪ್ರಕಾರದ ಗೋಡೆಯ ಗೂಡಿನಲ್ಲಿ ಕೆಂಪುಮರಳು ಶಿಲೆಯಲ್ಲಿ ರಚಿತವಾದ ಶಿಲ್ಪವೊಂದಿದೆ. ವೃಷಭನಾಥ ಹಾಗೂ ಅವನ ಲಾಂಛನವಾದ ವೃಷಭವನ್ನು ಈ ಶಿಲ್ಪದಲ್ಲಿ ಕಾಣುತ್ತೇವೆ.

### ಧರಣೇಂದ್ರ :

ಜೈನ ಧರ್ಮದಲ್ಲಿ ಬರುವಂತಹ ಪ್ರಮುಖವಾದ ಯಕ್ಷದೇವತೆ ಪಾರ್ಶ್ವನಾಥನ ಉಪದೇವತೆಯೂ ಹೌದು. ಈತನ ಶಿಲ್ಪವನ್ನು ಗೋಕಾಕ್‌ನಗರದ ಪಾಯಸಾಗರ ಶಾಲೆಯ ಹಿಂಭಾಗದ ಗುಹೆಯಲ್ಲಿ ನೋಡಬಹುದು. ಮೇಲ್ಭಾಗದಲ್ಲಿ ಮನುಷ್ಯ ಹಾಗೂ ಕೆಳಭಾಗ ಸರ್ಪಸ್ವರೂಪವಾಗಿದ್ದು, ಕಪ್ಪುಶಿಲೆಯಲ್ಲಿ ರಚಿಸಲ್ಪಟ್ಟಿದೆ. ತಲೆಯ ಮೇಲ್ಗಡೆ ಐದು ಹೆಡೆಯ ಸರ್ಪದ ಚಿತ್ರವಿದೆ. ಮಕರ ತೋರಣದ ಪ್ರಭಾವಳಿಯಿದ್ದು, ಶಿಲ್ಪಕ್ಕೆ ಕಿರೀಟ, ಕರ್ಣಮಂಡಲ, ಕಂಠಿಹಾರ, ಮಣಿಸರ, ಕಟಿಬಂಧ, ಕೈಬಳೆ, ಕಾಲ್ಗಡಗ, ಬೆರಳುಂಗುರದಂತಹ ಆಭರಣಗಳಿವೆ. ಇದು ಸುಮಾರು ಕ್ರಿ.ಶ. ೧೨ನೆಯ ಶತಮಾನದ ಅವಧಿಯದು. ಘೋಡಗೇರಿಯ ಬಸದಿಯಲ್ಲಿ ಇತ್ತೀಚಿಗೆ ನಿರ್ಮಿಸಿದ ಪಾರ್ಶ್ವನಾಥನ ಶಿಲ್ಪವಿದೆ. ಅದು ಪದ್ಮಾಸನದಲ್ಲಿದ್ದು, ಹಾಲುಗಲ್ಲಿನಲ್ಲಿ ರಚಿಸಲಾಗಿದೆ.

**ಸುಪಾರ್ಶ್ವನಾಥ ಶಿಲ್ಪ :**

ಗೋಕಾಕದಲ್ಲಿ ಅಂತಸ್ತಿನ ಜೈನ ಬಸದಿಯಲ್ಲಿ ಸಮಪಾದ ಭಂಗಿಯಲ್ಲಿ ಈ ಶಿಲ್ಪವಿದೆ. ಸು. ೧೧ನೆಯ ಶತಮಾನದ ಉತ್ತರಾರ್ಧ ಕಾಲದ್ದಾಗಿರಬಹುದಾದ ಇದು ಕಪ್ಪುಶಿಲೆಯಿಂದ ನಿರ್ಮಿಸಲ್ಪಟ್ಟಿದೆ. ವಿಗ್ರಹದ ಹಿಂಭಾಗದಲ್ಲಿ ಹೆಡೆ ಬಿಚ್ಚಿದ ಸರ್ಪವಿದ್ದು, ಮಕರತೋರಣದ ಪ್ರಭಾವಳಿಯಿದೆ. ಮಕರತೋರಣಕ್ಕೆ ಆಧಾರವಾಗಿರುವ ಸ್ತಂಭಗಳ ಕೆತ್ತನೆಗಳು ಸು. ೧೦ನೇ ಶತಮಾನದ ಲಕ್ಷಣಗಳನ್ನು ಪ್ರತಿಬಿಂಬಿಸುತ್ತವೆ. ಕಾಯೋತ್ಸರ್ಗ ಭಂಗಿಯಲ್ಲಿರುವ ಪಾರ್ಶ್ವನಾಥನ ತಲೆಗೂದಲು ಗುಂಗುರಾಗಿವೆ. ಉಪದೇವತೆಗಳಾದ ವರನಂದಿ ಮತ್ತು ಕಾಳಿಯ ಚಿತ್ರಣವೂ ಇಲ್ಲಿದೆ.

**ವೃಷಭನಾಥ :**

ಗೋಕಾಕದ ಜೈನ ಬಸದಿಯ ಗರ್ಭಗೃಹದ ಎಡ ಬದಿಯಲ್ಲಿದೆ. ಕಪ್ಪು ಶಿಲೆಯಲ್ಲಿರುವ ಇದು ಸಮಪಾದ ಭಂಗಿಯಲ್ಲಿದೆ. ವೃಷಭಾನಾಥನ ಶಿಲ್ಪದ ಇಕ್ಕೆಲಗಳಲ್ಲಿ ಪಾರ್ಶ್ವನಾಥ ಹಾಗೂ ಸುಪಾರ್ಶ್ವನಾಥರು ಕೂಡಾ ಸಮಭಂಗಿಯಲ್ಲಿ ಚಿತ್ರಿತರಾಗಿದ್ದಾರೆ. ತಲೆಯ ಮೇಲೆ ಛತ್ರಿಯಿದ್ದು, ಅದರ ಮೇಲ್ಭಾಗದಲ್ಲಿಯೂ ಕೂಡಾ ಕುಳಿತಿರುವ ತೀರ್ಥಂಕರರ ಚಿಕ್ಕ ಶಿಲ್ಪವಿದೆ. ಹಿಡಕಲ್ ಆಣೆಕಟ್ಟಿನ ಪರಿವೀಕ್ಷಣಾಲಯದ ಆರವಣದಲ್ಲಿ ಭಗ್ನಗೊಂಡಿರುವ ಪಾರ್ಶ್ವನಾಥನ ಶಿಲ್ಪವಿದೆ. ಅದು ಕಪ್ಪುಶಿಲೆಯಲ್ಲಿ ಮಾಡಲ್ಪಟ್ಟಿದೆ. ಇದೇ ರೀತಿಯಾದಂತಹ ಪಾರ್ಶ್ವನಾಥನ ಶಿಲ್ಪಗಳು ಕಲ್ಲೊಳ್ಳಿ ಮತ್ತು ಯಾದವಾಡದಲ್ಲಿಯೂ ಇವೆ. ಕಲ್ಲೊಳ್ಳಿಯಲ್ಲಿ ಚಂದ್ರನಾಥ ಹಾಗೂ ನೇಮಿನಾಥ ಮತ್ತು ಶಾಂತಿನಾಥನ ಶಿಲ್ಪಗಳು ಕಂಡುಬಂದಿವೆ.

## ಕೊಣ್ಣೂರು ಪರಿಸರದ ವೀರಗಲ್ಲು, ಮಾಸ್ತಿಕಲ್ಲು ಹಾಗೂ ನಿಷದಿಗಲ್ಲುಗಳು

ವೀರತನವು ನಮ್ಮ ಪ್ರಾಚೀನ ಕಾಲದಿಂದಲೂ ಇರುವ ಒಂದು ಮೌಲ್ಯವಾಗಿ ಪರಿಗಣಿಸಲ್ಪಟ್ಟಿವೆ. ಇದರ ಸಂಕೇತವಾಗಿ ವೀರರಾಗಿ ಮಡಿದ ವ್ಯಕ್ತಿಗಳ ಸ್ಮರಣಾರ್ಥವಾಗಿ ವೀರಗಲ್ಲುಗಳನ್ನು ನೆಟ್ಟಿರುತ್ತಾರೆ. ಯುದ್ಧದಲ್ಲಿ ಮಡಿದವರ ಸ್ಮರಾಣಾರ್ಥವಾಗಿ ಗೋಗ್ರಹಣದ ಸಂದರ್ಭದಲ್ಲಿ ಕಳ್ಳರೊಡನೆ ಹೋರಾಡುವ ಸಂದರ್ಭದಲ್ಲಿ ಹಾಗೂ ಮಹಿಳೆಯರ ರಕ್ಷಣೆಗೆ ಹೋರಾಡಿ ಮಡಿದ ಸಂದರ್ಭದಲ್ಲಿ ಇಂತಹ ಸ್ಮಾರಕಗಳನ್ನು ನೆಡುತ್ತಾರೆ. ಮಹಿಳೆಯರ ಮೇಲಿನ ಬಲತ್ಕಾರಗಳನ್ನು ತಡೆಯಲು ಪ್ರಯತ್ನಿಸಿ ಸಾವನ್ನಪ್ಪಿದವರ ಸಲುವಾಗಿ ನೆಡುವ ಸ್ಮಾಕರಗಳಿಗೆ 'ಪೆಣ್ಣೂಯಲ್' ಎಂದು ಕರೆಯುವರು ಪತಿಯೊಡನೆ ಸಹಗಮನ ಮಾಡಿಕೊಂಡ ಸಂದರ್ಭದಲ್ಲಿ 'ಮಾಸ್ತಿಕಲ್ಲು' (ಮಹಾಸತಿಕಲ್ಲು)ಗಳನ್ನು ನೆಡುತ್ತಾರೆ. ದನಕರುಗಳನ್ನು ಅಪಹರಿಸುತ್ತಿದ್ದ ಕಳ್ಳರೊಡನೆ ಹೋರಾಡಿ ಮಡಿದವರ ಸಲುವಾಗಿ ನೆಡುವ ಸ್ಮಾರಕ ಶಿಲೆಗೆ 'ತುರುಗೋಳ್' ವೀರಗಲ್ಲುಗಳೆಂದು ಕರೆಯಲಾಗುತ್ತದೆ. ಗೋವುಗಳನ್ನು ದಾನಮಾಡಿದುದರ ನೆನಪಿಗಾಗಿ ಗೋಸಾಸ ಕಲ್ಲುಗಳನ್ನು ನೆಡುತ್ತಿದ್ದರು. ಜೈನಧರ್ಮದ ಸಂಪ್ರದಾಯದ ಪ್ರಕಾರ ಸಲ್ಲೇಖನ ವ್ರತ ಕೈಗೊಂಡು ದೇಹತ್ಯಾಗ ಮಾಡುವ ಸಂದರ್ಭದ ಘಟನೆಯನ್ನು ಚಿತ್ರಿಸಲು ನಿಷದಿಗಲ್ಲುಗಳನ್ನು ನೆಡುತ್ತಾರೆ.

ಕೊಣ್ಣೂರು ಪರಿಸರದಲ್ಲಿ ಮೇಲೆ ಉಲ್ಲೇಖಿಸಿದ ಶಿಲ್ಪಗಳು ಲಭ್ಯವಿದ್ದು ಅವು ಅಂದಿನ ಕಾಲದ ಸಾಮಾಜಿಕ ಮತ್ತು ಧಾರ್ಮಿಕ ಚಿತ್ರಣವನ್ನು ಕಟ್ಟಿಕೊಡಲು ನಮಗೆ ಸಹಾಯಕವಾಗಿವೆ.

**ವೀರಗಲ್ಲುಗಳು :**

ಕೊಣ್ಣೂರು ಪರಿಸರದಲ್ಲಿ ಹಲವು ವೀರಗಲ್ಲುಗಳು ದೊರಕಿದ್ದು, ಅವು ಈ ಭಾಗದ ಯುದ್ಧದ ಚಟುವಟಿಕೆಗಳನ್ನು ಮತ್ತು ಅಂದಿನ ಸಾಮಾಜಿಕ ಜೀವನದ ಚಿತ್ರಣವನ್ನು ಕಟ್ಟಿಕೊಡಲು ಸಹಾಯಕವಾಗಿವೆ. ಘೋಡಗೇರಿಯ ಗಜಲಿಂಗೇಶ್ವರ ದೇವಾಲಯದಲ್ಲಿ ಮೂರು ವೀರಗಲ್ಲುಗಳು, ಇಲ್ಲಿನ ವಿರಕ್ತಮಠದ ಕಾಂಪೌಂಡ್ ಗೋಡೆಯ ಹೊರಭಾಗದಲ್ಲಿ ಎರಡು ವೀರಗಲ್ಲುಗಳನ್ನು ಹಾಕಿ ಕಟ್ಟಲಾಗಿದೆ. ಕೊಣ್ಣೂರಿನ ಕಲಮೇಶ್ವರ ದೇವಾಲಯದ ಎದುರುಗಡೆ ವೀರಗಲ್ಲುಗಳು ಲಭ್ಯವಾಗಿವೆ.

ಘೋಡಗೇರಿಯ ಗಜಲಿಂಗೇಶ್ವರ ದೇವಾಲಯದ ಬಲಪಾರ್ಶ್ವದ ಪ್ರಾಕಾರದಲ್ಲಿ ಎರಡು ವೀರಗಲ್ಲುಗಳಿವೆ. ಶಿಲ್ಪದ ಕೆಳಭಾಗದಲ್ಲಿ ಯುದ್ಧದ ದೃಶ್ಯವನ್ನು ಅದರ ಮೇಲ್ಭಾಗದಲ್ಲಿ ಯುದ್ಧದಲ್ಲಿ ಮಡಿದ ವ್ಯಕ್ತಿಯನ್ನು ಅಪ್ಸರೆಯರು ದೇವಲೋಕ್ಕೆ (ಸ್ವರ್ಗ) ಒಯ್ಯುತ್ತಿರುವ ದೃಶ್ಯ ಹಾಗೂ ಮೇಲ್ಭಾಗದಲ್ಲಿ ಮಡಿದ ವ್ಯಕ್ತಿ ಸ್ವರ್ಗಸೇರಿ ಅಲ್ಲಿ ಕುಳಿತು ಯತಿಯೊಡನೆ ಲಿಂಗ ಪೂಜೆ ಮಾಡುವ ದೃಶ್ಯವಾಳಿಗಳಿವೆ. ಇನ್ನೊಂದು ವೀರಗಲ್ಲು ನಾಲ್ಕು ಹಂತಗಳಿಂದ ಕೂಡಿದ್ದು, ಕೆಳಗಿನ ಎರಡು ಭಾಗಗಳು ಯುದ್ಧದ ದೃಶ್ಯವನ್ನು, ಯುದ್ಧದಲ್ಲಿ ಮಡಿದ ವೀರನನ್ನು ಅಪ್ಸರೆಯರು ಸ್ವರ್ಗಕ್ಕೆ ಒಯ್ಯುವ ಹಾಗೂ ಮೇಲ್ಭಾಗದಲ್ಲಿ ಸ್ವರ್ಗಸೇರಿದ ಅಲ್ಲಿ ಯತಿಯೊಡನೆ ಲಿಂಗಪೂಜೆ ಮಾಡುವ ದೃಶ್ಯಗಳಿವೆ. ಸ್ಥಳೀಯ ಮಠದ ಕಾಂಪೌಂಡ್ ಗೋಡೆಯ ಹೊರಭಾಗದಲ್ಲಿ ಎರಡು ಶಿಲ್ಪಗಳಿದ್ದು, ಅವು ಕೂಡ ಮೇಲೆ ವಿವರಿಸಿದ ದೃಶ್ಯಗಳನ್ನೇ ಹೊಂದಿವೆ. ಕೊಣ್ಣೂರಿನ ಕಲಮೇಶ್ವರ ದೇವಾಲಯದ ಎದುರಿಗೆ ಇದೇ ರೀತಿಯ ದೃಶ್ಯಗಳಿರುವ ವೀರಗಲ್ಲು ಇವೆ. ಗಜಲಿಂಗೇಶ್ವರ ದೇವಾಲದಲ್ಲಿರುವ ಶಿಲ್ಪಗಳನ್ನು ಕಪ್ಪುಕಲ್ಲಿನಲ್ಲಿ ಮಾಡಿದ್ದರೆ, ಅಲ್ಲಿನ ವಿರಕ್ತಮಠದ ಗೋಡೆಯಲ್ಲಿರುವ ಶಿಲ್ಪಗಳನ್ನು ಕೆಂಪು ಮರಳು ಶಿಲೆಯಿಂದ ಕಂಡರಿಸಲಾಗಿದೆ.

**ಮಾಸ್ತಿಕಲ್ಲುಗಳು :**

ಘೋಡಗೇರಿಯ ಗಜಲಿಂಗೇಶ್ವರ ದೇವಾಲಯದ ಪ್ರಕಾರದ ಬಲಬದಿಯಲ್ಲಿ ಮೂರು ಮಾಸ್ತಿಕಲ್ಲುಗಳಿವೆ. ಅವುಗಳನ್ನು ಕಪ್ಪುಶಿಲೆಯಲ್ಲಿ ಕಂಡರಿಸಲಾಗಿದೆ. ಅವುಗಳಲ್ಲಿ ಒಂದು ಮಾಸ್ತಿಕಲ್ಲಿನ ಫಲಕ ವಿಶೇಷವಾದ ಕೆತ್ತನೆಯನ್ನು ಹೊಂದಿದೆ. ಅಗಲವಾದ ಶಿಲ್ಪದ ಫಲಕದ ಮೇಲೆ ಸ್ತಂಭಾಕೃತಿಯಲ್ಲಿ ಬಲಗೈಯನ್ನು ಅಭಯ ಹಸ್ತದ ರೀತಿಯಲ್ಲಿ ಕೆತ್ತಿದ್ದಾರೆ. ಒಂದೇ ಕೈಯ ಇಂತಹ ಶಿಲ್ಪಗಳನ್ನು 'ಒಕ್ಕೈ ಶಿಲ್ಪ' ಎಂದು ಕರೆಯುವರು. ಸ್ತಂಭಾಕೃತಿಯಲ್ಲಿಯೇ ದೇಹವನ್ನು ಪ್ರಾತಿನಿಧಿಕವಾಗಿ ಕೆತ್ತಲಾಗಿದ್ದು, ಸ್ತಂಭದ ಮೇಲ್ಭಾಗದಲ್ಲಿ ರುಂಡ ಭಾಗವನ್ನು ಸಹ ಕಂಡರಿಸಿದ್ದಾರೆ. ಇಲ್ಲಿನ ಇನ್ನೊಂದು ಮಾಸ್ತಿಕಲ್ಲಿನಲ್ಲಿ ಬಲಗೈಯನ್ನು ಅಭಯ ರೀತಿಯಾಗಿ ಕೆತ್ತಿದ್ದಾರೆ. ಈ ಕೈಯ ಚಿತ್ರದ ಕೆಳಭಾಗದಲ್ಲಿ ಪೂಜೆಯಲ್ಲಿ

ನಿರತರಾಗಿರುವ ಸ್ತ್ರೀ ಪುರುಷನ ಶಿಲ್ಪವನ್ನು ರಚಿಸಿದ್ದಾರೆ. ಮತ್ತೊಂದು ಶಿಲ್ಪದಲ್ಲಿ 'ಎಡಗೈ'ಯನ್ನು ಅಭಯ ರೀತಿಯಲ್ಲಿ ಮೇಲಕ್ಕೆತ್ತಿ ಕೆತ್ತಲಾಗಿದೆ. ಇದೂ ಒಕ್ಕೆ ಮಾಸ್ತಿಗಲ್ಲಾಗಿದ್ದು, ಮೇಲ್ಭಾಗದಲ್ಲಿ ಪೂಜೆ ನಿರತ ಸ್ತ್ರೀ ಮತ್ತು ಪುರುಷರ ಶಿಲ್ಪಗಳಿವೆ. ಇಂತಹದ್ದೇ ಶಿಲ್ಪವು ಕಲೊಳ್ಳಿಯ ರಾಮಲಿಂಗೇಶ್ವರ ದೇವಾಲಯದ ಹತ್ತಿರದಲ್ಲಿದೆ.

## ನಿಷದಿಗಲ್ಲುಗಳು :

ಕೊಣ್ಣೂರು ಪರಿಸರದಲ್ಲಿ ಜೈನಧರ್ಮವು ಪ್ರಾಚೀನ ಕಾಲದಿಂದಲೂ ಅಸ್ತಿತ್ವದಲ್ಲಿದ್ದರೂ, ನಿಷದಿಗಲ್ಲುಗಳು ವಿರಳವಾಗಿ ಲಭ್ಯವಾಗಿವೆ. ಕೊಣ್ಣೂರಿನ ಹಣಮಂತ ದೇವಾಲಯದ ಎದುರಿಗೆ ಅಸ್ಪಷ್ಟವಾದ ಶಿಲ್ಪವಿದೆ. ಕೆಳಗಿನ ಎರಡು ಭಾಗಗಳು ಅಸ್ಪಷ್ಟವಾಗಿದ್ದು, ಮೇಲ್ಭಾಗದ ಶಿಲಾಪಟ್ಟಿಕೆಯಲ್ಲಿ ಅರ್ಧ ಪದ್ಮಾಸನದಲ್ಲಿ ಕುಳಿತಿರುವ ತೀರ್ಥಂಕರನ ಶಿಲ್ಪವಿದೆ.

**ಅಡಿಟಿಪ್ಪಣಿಗಳು**

೧. ಎಆರ್ಐಇ, ೧೯೫೨-೫೩, ಅಪೆಂಡಿಕ್ಸ್ ಬಿ., ನಂ.೫೪

೨. ಎಆರ್ಐಇ, ೧೯೫೨-೫೩, ಅಪೆಂಡಿಕ್ಸ್ ಬಿ., ನಂ.೫೫

೩. ಶಾಸನ ಅಧ್ಯಯನ ೨, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೨೦-೨೧

೪. ಕೆಐ, ಸಂ.V, ನಂ.೬

೫. ಗೆರಾರ್ಡ್ ಫೋಕೇಮಾ, ಚಾಲುಕ್ಯನ್ ಆರ್ಕಿಟೆಕ್ಚರ್ ಸಂಪುಟ ೧, ಪು.೨೫೯

೬. ಎಆರ್ಐಇ, ೧೯೫೨-೫೩, ಅಪೆಂಡಿಕ್ಸ್ ಬಿ., ನಂ.೫೧

೭. ಎಆರ್ಐಇ, ೧೯೫೨-೫೩, ಅಪೆಂಡಿಕ್ಸ್ ಬಿ., ನಂ.೫೨

೮. ಎಆರ್ಐಇ, ೧೯೫೨-೫೩, ಅಪೆಂಡಿಕ್ಸ್ ಬಿ., ನಂ.೫೩

೯. ಸೂರ್ಯನಾಥ ಕಾಮತ್, ಬೆಳಗಾವಿ ಗೆಜೆಟಿಯರ್

೧೦. ಸೂರ್ಯನಾಥ ಕಾಮತ್, ಬೆಳಗಾವಿ ಗೆಜೆಟಿಯರ್, ಪು. ೯೨೬

೧೧. ಸೂರ್ಯನಾಥ ಕಾಮತ್, ಬೆಳಗಾವಿ ಗೆಜೆಟಿಯರ್, ಪು.೯೨೬

೧೨. ಎಆರ್ಐಇ, ೧೯೫೨-೫೩, ಅಪೆಂಡಿಕ್ಸ್ ಬಿ., ನಂ.೫೨

೧೩. ಎಪಿಗ್ರಾಫಿಯ ಇಂಡಿಕ ೧೭, ಪು.೨೩೧

೧೪. ಸೂರ್ಯನಾಥ ಕಾಮತ್, ಬೆಳಗಾವಿ ಗೆಜೆಟಿಯರ್, ಪು.೮೭೯

## ಅಧ್ಯಾಯ ಐದು

### ಸಮಾರೋಪ

ಪ್ರಸ್ತುತ ವಿಷಯವನ್ನು ಕುರಿತು ವಿವರ ಅಧ್ಯಯನಗಳು ನಡೆದಿರುವುದು ವಿರಳ. ನಡೆದ ಕೆಲವು ಅನ್ವೇಷಣೆ ಹಾಗೂ ಸಂಶೋಧನೆಗಳು ಈ ಭಾಗದ ಚರಿತ್ರೆಯನ್ನು ಸಮಗ್ರವಾಗಿ ಕಟ್ಟಿಕೊಡಲು ಆಗುವುದಿಲ್ಲವೆಂದೇ ಹೇಳಬೇಕು. ಆದ್ದರಿಂದ ಈ ಪರಿಸರದ ಚರಿತ್ರೆಯನ್ನು ವಿಶ್ಲೇಷಣಾತ್ಮಕ ಹಾಗೂ ವಿವರಣಾತ್ಮವಾಗಿ ಕಟ್ಟಿಕೊಡುವ ಪ್ರಯತ್ನದ ಹಿನ್ನೆಲೆಯಲ್ಲಿ ಕ್ಷೇತ್ರಕಾರ್ಯವನ್ನು ಕೈಗೊಳ್ಳಲಾಯಿತು. ಆ ಮೂಲಕ ಕೊಣ್ಣೂರು ಪರಿಸರದಲ್ಲಿ ಪ್ರಾಗಿತಿಹಾಸ ಕಾಲದ ನೆಲೆಗಳು, ಚಾರಿತ್ರಿಕ ಕಾಲಘಟ್ಟದ ದೇವಾಲಯಗಳು, ಮೂರ್ತಿಶಿಲ್ಪಗಳು ಹಾಗೂ ಶಾಸನಗಳ ಅಧ್ಯಯನವನ್ನು ನಡೆಸಲಾಯಿತು. ಒಟ್ಟಾರೆಯಾಗಿ ಈ ಪರಿಸರದ ಚರಿತ್ರೆಯನ್ನು ಸಮಗ್ರವಾಗಿ ರಚಿಸುವ ಸಲುವಾಗಿ ಸೂಕ್ಷ್ಮ ಸಂಗತಿಗಳನ್ನು ಅರಿಯುವ ಪ್ರಯತ್ನ ಮಾಡಲಾಗಿದೆ. ಪ್ರಾಗಿತಿಹಾಸಿ ಕಾಲದಿಂದಲೂ ಇಂದಿನವರೆಗೆ ಮಾನವನ ಬದುಕಿನಲ್ಲಿ ಈ ಪರಿಸರ ಒಂದಲ್ಲ ಒಂದು ರೀತಿಯಲ್ಲಿ ತನ್ನ ಪ್ರಭಾವವನ್ನು ಬೀರಿರುವುದು ತಿಳಿದುಬರುವ ಸಂಗತಿಯಾಗಿದೆ.

ಅಧ್ಯಯನಕ್ಕೆ ಆಯ್ದುಕೊಂಡ ಗೋಕಾಕ್ ತಾಲೂಕಿನ ಪಶ್ಚಿಮ ಮತ್ತು ನೈರುತ್ಯ ಭಾಗ ಹಾಗೂ ಹುಕ್ಕೇರಿ ತಾಲೂಕಿನ ದಕ್ಷಿಣ ಮತ್ತು ಪೂರ್ವಭಾಗಗಳಲ್ಲಿ ವಿವರವಾದ ಕ್ಷೇತ್ರಕಾರ್ಯವನ್ನು ಕೈಗೊಳ್ಳಲಾಯಿತು. ಇಲ್ಲಿರುವ ಘಟಪ್ರಭಾ, ಹಿರಣ್ಯಕೇಶಿ ಹಾಗೂ ಮಾರ್ಕಂಡೇಯ ನದಿ ಪರಿಸರದಲ್ಲಿ ಲಕ್ಷಾಂತರ ವರ್ಷಗಳಿಂದ ಜನವಸತಿಯಿರುವ ಎಲ್ಲ ಲಕ್ಷಣಗಳು ಕಂಡುಬರುತ್ತವೆ. ಈ ನದಿಗಳ ದಂಡೆ ಪ್ರದೇಶದಲ್ಲಿ ಆದಿಶಿಲಾಯುಗದ ನೆಲೆಗಳಿದ್ದು, ಅವುಗಳನ್ನು ಈಗಾಗಲೇ ಪತ್ತೆಹಚ್ಚುವ ಕಾರ್ಯ ನಡೆದಿದೆ. ನನ್ನ ಅಧ್ಯಯನದ ಸಂದರ್ಭದಲ್ಲಿ ಹೊಸದಾಗಿ ಎರಡು-ಮೂರು ನೆಲೆಗಳನ್ನು ಹುಡುಕುವ ಪ್ರಯತ್ನ ಮಾಡಲಾಗಿದೆ. ಅವುಗಳು ಬಹುತೇಕವಾಗಿ ಹಾಳಾಗಿದ್ದು, ಇನ್ನೂ ಕೆಲವು ಮಣ್ಣಿನಲ್ಲಿ ಹುದುಗಿ ಹೋಗಿವೆ. ಆಧುನಿಕ ಮಾನವನ ವಿಸ್ತೃತ ಕೃಷಿ ಚಟುವಟಿಕೆಗಳ ಕಾರಣದಿಂದ ತಮ್ಮ ಮೂಲ ಸ್ವರೂಪವನ್ನು ಕಳೆದುಕೊಂಡಿವೆ. ದಟ್ಟ, ಕುಂದರಗಿ, ಪಾಚ್ಛಾಪುರ, ಗುಮಚಿನಮರಡಿ, ಮಾವನೂರು, ಕೊಳವಿ, ಅರಭಾವಿ, ಲೋಳಸೂರ,

ಬೆಣಚಿನಮರಡಿ, ಮಾಲದಿನ್ನಿ ಹಾಗೂ ಉಪ್ಪಾರಟ್ಟಿ ಪ್ರಮುಖವಾದ ಹಳೆಯ ಶಿಲಾಯುಗದ ನೆಲೆಗಳು, ಗುಮಚಿನಮರಡಿ, ಶೀಗಿಹಳ್ಳಿ ಮತ್ತು ಲೋಳಸೂರಗಳಲ್ಲಿ ಕ್ಷೇತ್ರಕಾರ್ಯ ಕೈಗೊಂಡ ಸಂದರ್ಭದಲ್ಲಿ ಈ ಕಾಲಘಟ್ಟದ ವಿವಿಧ ಆಯುಧೋಪಕರಣಗಳು ಪತ್ತೆಯಾದವು. ನದಿಗುಡಿಖೇತ್ರ ಮತ್ತು ಗೋಕಾಕದ ಸಮೀಪದ ಚಿಕದೌಲಿಗಳು ಸೂಕ್ಷ್ಮಶಿಲಾಯುಗದ ನೆಲೆಯಾಗಿವೆ. ಈ ನೆಲೆಗಳಲ್ಲಿಯೂ ಸೂಕ್ಷ್ಮಶಿಲಾಯುಗದ ಕಲ್ಲಿನ ಉಪಕರಣಗಳು ದೊರಕಿವೆ. ಈ ಪರಿಸರದಲ್ಲಿ ಬೃಹತ್ ಶಿಲಾಯುಗದ ಸಂಸ್ಕೃತಿಯ ಬಹಳ ವಿಸ್ತಾರವಾಗಿ ಹರಡಿರುವುದು ಕಂಡುಬರುತ್ತದೆ. ಗೋಕಾಕ್ ಹಾಗೂ ಹುಕ್ಕೇರಿ ತಾಲೂಕಿನ ಬಹುತೇಕ ಊರುಗಳಲ್ಲಿ ಈ ಸಂಸ್ಕೃತಿಯ ನೆಲೆಗಳಿವೆ. ಕೊಣ್ಣೂರು, ಕುಂದರಗಿ, ಸಾವಳಗಿ, ನಿರ್ವಾಣಹಟ್ಟಿ, ನದಿಗುಡಿಖೇತ್ರ, ಗೊಡಚಿನಮಲ್ಕಿ, ಗುಮಚಿನಮರಡಿ, ಹುನ್ನೂರು, ಹೊನ್ನಿನಮಾವನೂರು ಮುಂತಾದ ಊರುಗಳಲ್ಲಿ ಬೃಹತ್‌ಶಿಲಾಯುಗದ ಶಿಲಾಗೋರಿಗಳ ಅವಶೇಷಗಳನ್ನು ಅಧ್ಯಯನ ಮಾಡಲಾಯಿತು. ಈ ಶಿಲಾಗೋರಿಗಳಲ್ಲಿ ಪ್ರಮುಖವಾಗಿ ಡೋಲ್‌ಮೆನ್‌ಗಳು, ಹಾದಿಕೋಣೆ ಹಾಗೂ ಶಿಲಾವೃತ್ತಗಳು ಕಂಡುಬಂದವು. ಇವುಗಳಲ್ಲಿ ಕೆಲವು ಸ್ಮಾರಕಗಳು ಮಾತ್ರ ನಮಗೆ ನೋಡಲು ಸಿಗುತ್ತವೆ. ಬಹುತೇಕ ಸಮಾಧಿಗಳನ್ನು ಜನರು ಮೂಢನಂಬಿಕೆಯಿಂದ ಅಥವಾ ಹಣದ ಆಸೆಗಾಗಿ ಅಗೆದು ಹಾಳು ಮಾಡಿದ್ದಾರೆ. ಮತ್ತೆ ಕೆಲವು ಕಡೆ ಅವುಗಳನ್ನು ನಾಶ ಮಾಡಿ ಅಲ್ಲಿ ಕೃಷಿ ಚಟುವಟಿಕೆಯನ್ನು ಕೈಗೊಂಡಿರುವುದು ಕಂಡುಬರುತ್ತದೆ. ಸಾವಳಗಿಯಲ್ಲಿನ ಶಿಲಾಗೋರಿಗಳನ್ನು ನಾಶ ಮಾಡಿ ಅಲ್ಲಿ ಜನರು ಸ್ಮಶಾನದ ಜಾಗವನ್ನಾಗಿ ಮಾಡಿಕೊಂಡಿದ್ದಾರೆ. ಘೋಡಗೇರಿಯ ಇಂತಹ ಸ್ಮಾರಕಗಳನ್ನು ಹಾಳುಗೆಡವಿ ಅಲ್ಲಿ ಗಣಿಗಾರಿಕೆಯನ್ನು ಪ್ರಾರಂಭಿಸಿದ್ದಾರೆ. ಹೀಗೆ ಪ್ರಾಚೀನ ಸಂಸ್ಕೃತಿಯ ಪ್ರತೀಕವಾಗಿದ್ದ ಬೃಹತ್ ಶಿಲಾಗೋರಿಗಳನ್ನು ಆಧುನಿಕ ಮಾನವನು ತನ್ನ ವಿಸ್ಪತ ಜೀವನ ಶೈಲಿಯ ಕಾರಣದಿಂದ ನಾಶ ಮಾಡುತ್ತಿದ್ದಾನೆ. ಈ ಪರಿಸರದ ಪ್ರಾಗಿತಿಹಾಸ ಕಾಲದ ಸಂಸ್ಕೃತಿಯ ಪ್ರತಿಬಿಂಬಗಳಾದ ಅವುಗಳನ್ನು ರಕ್ಷಿಸುವುದು ಇಂದಿನ ಅವಶ್ಯಕತೆಯಾಗಿದೆ.

ಚಾರಿತ್ರಿಕ ಕಾಲಘಟ್ಟಕ್ಕೆ ಸಂಬಂಧಿಸಿದಂತೆ ಈ ಭಾಗದಲ್ಲಿ ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯ ಹಾಗೂ ಅವರ ಸಾಮಂತರಾದ ಸವದತ್ತಿಯ ರಟ್ಟರ ಅನೇಕ ದೇವಾಲಯಗಳು ಕಂಡುಬರುತ್ತವೆ. ವಿಶೇಷವಾಗಿ ಗೋಕಾಕ ಜಲಪಾತದ ಎಡ ಹಾಗೂ ಬಲ ಬದಿಯಲ್ಲಿ ದ್ರಾವಿಡ ಹಾಗೂ ಫಂಸಾನಾ ಶೈಲಿಯ ಹತ್ತಾರು ದೇವಾಲಯಗಳು ಕಂಡುಬರುತ್ತವೆ. ಈ ಪ್ರದೇಶವನ್ನು 'ದೇವಾಲಯಗಳ ಸಂಕೀರ್ಣ' ಎಂದು ಕರೆಯಬಹುದಾಗಿದೆ. ಇಲ್ಲಿನ ದೇವಾಲಯಗಳು ರಾಷ್ಟ್ರಕೂಟ, ಕಲ್ಯಾಣದ ಚಾಲುಕ್ಯರ ಹಾಗೂ ಅವರ ಸಾಮಂತರಾದ ಸವದತ್ತಿಯ ರಟ್ಟರ ಕಾಲದಲ್ಲಿ ನಿರ್ಮಾಣವಾದಂತಹವುಗಳಾಗಿವೆ. ಬಹುತೇಕ ದೇವಾಲಯಗಳು 'ಏಕಕೂಟ' ದೇವಾಲಯಗಳು. ಕೆಲವು ಮಾತ್ರ 'ತ್ರಿಕೂಟಾಚಲ' ದೇವಾಲಯಗಳಾಗಿವೆ. ಅವುಗಳಲ್ಲಿ ಗೋಕಾಕ ಜಲಪಾತದ ಎಡದಂಡೆಯ ಮೇಲಿರುವ ಕಾಡಸಿದ್ಧೇಶ್ವರ, ಅರಭಾವಿಯ ಬಸವೇಶ್ವರ ದೇವಾಲಯಗಳು ಪ್ರಮುಖವಾಗಿವೆ. ಇದೇ ರೀತಿಯ ದೇವಾಲಯಗಳನ್ನು ಕಲ್ಲೊಳ್ಳಿ ಹಾಗೂ

ಮಮದಾಪುರದಲ್ಲಿಯೂ ಕಾಣುತ್ತೇವೆ. ಈ ಪರಿಸರದ ಬಹುತೇಕ ದೇವಾಲಯಗಳು ಕದಂಬನಾಗರ (ಫಂಸಾನಾ) ಶಿಖರಗಳನ್ನು ಹಾಗೂ ಮುಂಭಾಗದಲ್ಲಿ ಸುಖನಾಸಿಗಳನ್ನು ಹೊಂದಿರುವುದು ವಿಶೇಷ. ಉದಾಹರಣೆಗೆ ; ಕೊಣ್ಣೂರಿನ ಚಿಕಲೇಶ್ವರ, ಗೋಕಾಕ ಜಲಪಾತದ ಬಳಿಯ ಬಸವೇಶ್ವರ, ಕುಂದರಗಿಯ ಸಂಗಮೇಶ್ವರ ದೇವಾಲಯಗಳು ಪ್ರಮುಖವಾಗಿವೆ. ಹಾಗೆಯೇ ಪಾಚ್ಛಾಪುರದ ಮಲ್ಲಿಕಾರ್ಜುನ, ಘೋಡಗೋರಿಯ ರಾಮಲಿಂಗೇಶ್ವರ, ಗೋಕಾಕ ಜಲಪಾತ ಬಳಿಯ ಕಾಡಸಿದ್ಧೇಶ್ವರ ದೇವಾಲಯದ ಪಶ್ಚಿಮಾಭಿಮುಖದ ಶಿಖರ, ಗೋಕಾಕದ ಮಹಾಲಿಂಗೇಶ್ವರ ದೇವಾಲಯಗಳು ಕೂಡ ಕದಂಬನಾಗರ ಶಿಖರವನ್ನು ಹೊಂದಿದೆ. ಆದರೆ, ಆವುಗಳಲ್ಲಿ ಕೆಲವು ಹಾಳಾಗಿದ್ದರೆ, ಮತ್ತೆ ಕೆಲವು ಸಂಪೂರ್ಣವಾಗಿ ನವೀಕೃತಗೊಂಡಿವೆ. ಗೋಕಾಕ ಜಲಪಾತದ ಬಳಿಯ ಕಾಡಸಿದ್ಧೇಶ್ವರ ದೇವಾಲಯದ ಪೂರ್ವಾಭಿಮುಖ ಹಾಗೂ ದಕ್ಷಿಣಾಭಿಮುಖದ ಗರ್ಭಗೃಹದ ಮೇಲಿರುವ ಶಿಖರಗಳು, ದತ್ತಾತ್ರೇಯ ದೇವಾಲಯದ, ಘೋಡಗೇರಿಯ ನೀಲಕಂಠ ದೇವಾಲಯದ ಶಿಖರಗಳು ದ್ರಾವಿಡ ಶೈಲಿಯಲ್ಲಿವೆ. ದತ್ತಾತ್ರೇಯ ದೇವಾಲಯದ ಸ್ತೂಪಿಯು ಚೌಕಾಕಾರವಾಗಿದ್ದು, ಅದು ಬಾದಾಮಿ ಚಾಲುಕ್ಯರ ಮಾದರಿಯನ್ನು ಹೋಲುವಂತಿದೆ. ಶಿಖರವನ್ನು ಶಿಲ್ಪಪಟ್ಟಿಕೆಗಳಿಂದ ಅಲಂಕರಿಸಲಾಗಿದೆ. ಭಿತ್ತಿಗಳೂ ಕೂಡ ಅಲಂಕೃತಗೊಂಡಿದ್ದು ಅದರಲ್ಲಿ ಅರ್ಧಗಂಬಗಳು, ನಾಗರ ಹಾಗೂ ಲತಿನ-ಕೂಟ, ದ್ರಾವಿಡ ಮಾದರಿಯ ಶಿಖರಗಳ ಪ್ರತಿಕೃತಿಗಳು ಹಾಗೂ ಸಲಿಲಾಂತರಗಳಲ್ಲಿ ಅಂಲಕರಣೆ ಮಾಡಲಾಗಿದೆ.

ಇಲ್ಲಿನ ದೇವಾಲಯಗಳಲ್ಲಿ ಸಂಪೂರ್ಣವಾಗಿ ನಾಗರ ಶೈಲಿಯ ಶಿಖರಗಳನ್ನು ಕಾಣುವುದಿಲ್ಲ. ಆದರೂ ಕೂಡ ಅದರ ಪ್ರಭಾವವನ್ನು ಗಮನಿಸಬಹುದಾಗಿದೆ. ಭಿತ್ತಿಯಲ್ಲಿ ಹಾಗೂ ದ್ವಾರಬಂಧದ ಮೇಲ್ಭಾಗದಲ್ಲಿ ನಾಗರ ಹಾಗೂ ಲತಿನಾ-ಕೂಟ ಮಾದರಿಯ ಶಿಖರಗಳ ಪ್ರತಿಕೃತಿಗಳನ್ನು ಕೆತ್ತಿರುವುದು ಕಂಡುಬರುತ್ತದೆ. ಈ ಪರಿಸರದ ಗೋಕಾಕ, ಕೊಣ್ಣೂರು, ಪಾಚ್ಛಾಪುರ ಹಾಗೂ ಘೋಡಗೇರಿಯಲ್ಲಿ ಜೈನ ಬಸದಿಗಳನ್ನು ಕಾಣುತ್ತೇವೆ. ಹಾಗೆಯೇ ಈ ಪರಿಸರದಲ್ಲಿ ಕಂಡುಬರುವ ಬೃಹತ್ ಶಿಲಾಗೋರಿಗಳನ್ನು ಸ್ಥಳೀಯರು ಜೈನ ಮುನಿಗಳ 'ಗುಂಫಾ' ಎಂದು ಕರೆಯುವರು.

ಈ ಪರಿಸರದಲ್ಲಿ ಸಿಕ್ಕಿರುವ ಶಾಸನಗಳು ಮಾತ್ರ ವಿರಳವೆನ್ನಬಹುದು. ಆದರೂ ಸಿಕ್ಕಿರುವ ಶಾಸನಗಳಿಂದ ಈ ಭಾಗದ ಆಡಳಿತ, ಧಾರ್ಮಿಕ, ಸಾಮಾಜಿಕ ಹಾಗೂ ಇನ್ನಿತರ ಚಟುವಟಿಕೆಗಳನ್ನು ತಿಳಿಯಬಹುದಾಗಿದೆ. ಕ್ರಿ.ಶ. ಆರನೆಯ ಶತಮಾನದೆನ್ನಲಾದ ರಾಷ್ಟ್ರಕೂಟರ ಕಾಲದ ಶಾಸನವು ಈ ಪರಿಸರದಲ್ಲಿ ಸಿಕ್ಕಿರುವ ಅತೀ ಪ್ರಾಚೀನವಾದ ಶಾಸನವೆನ್ನಬಹುದು. ಗೋಕಾಕ ಜಲಪಾತದ ಬಳಿಯ ಬಂಡೆಗಲ್ಲಿನಲ್ಲಿರುವ ಈ ಶಾಸನದಲ್ಲಿ ಚೌಕಾಕಾರದ ತಲೆಕಟ್ಟಿನ ಲಿಪಿಯನ್ನು ಹೊಂದಿದೆ. ಇಲ್ಲಿ ಲಭ್ಯವಾದ ಶಾಸನಗಳು ಕದಂಬ, ಬಾದಾಮಿ ಚಾಲುಕ್ಯ, ರಾಷ್ಟ್ರಕೂಟ, ಕಲ್ಯಾಣದ ಚಾಲುಕ್ಯ, ಕಲಚೂರಿ, ಸೇವುಣ ಹಾಗೂ ಸವದತ್ತಿಯ ರಟ್ಟರ ಆಡಳಿತಾವಧಿಯ ಮಾಹಿತಿಗಳನ್ನು ತಿಳಿಸಿಕೊಡುತ್ತವೆ. ಆಡಳಿತ ವ್ಯವಸ್ಥೆಯಲ್ಲಿ ಅರಸರಿಗೆ ಸಹಾಯ ಮಾಡಲು ಮಹಾಮಂಡಳೇಶ್ವರ, ಮಂಡಳೇಶ್ವರ, ಮಹಾಸಾಮಂತ, ದಂಡಾಧಿಪತಿ

ಹಾಗೂ ಗಾವುಂಡರಂತಹ ಅಧಿಕಾರಿವರ್ಗ ಇದ್ದುದು ಶಾಸನಗಳಿಂದ ತಿಳಿದುಬರುವ ಅಂಶವಾಗಿದೆ. ಕೆಲವು ಶಾಸನದಲ್ಲಿ ಅರಸರ, ರಾಣಿಯರ, ವಂಶಾವಳಿ, ಧಾರ್ಮಿಕ, ಸಾಮಾಜಿಕ ಚಟುವಟಿಕೆಗಳನ್ನು ಕುರಿತು ಉಲ್ಲೇಖಗಳು ಕಂಡುಬರುತ್ತವೆ.

ಎಂಟರಿಂದ ಹದಿನಾಲ್ಕನೆಯ ಶತಮಾನಗಳಲ್ಲಿ ನಡೆದಿರುವ ಧಾರ್ಮಿಕ ತಲ್ಲಣಗಳ ಕುರಿತಂತೆ ಇರುವ ಸೂಚನೆಗಳು ಇಲ್ಲಿರುವ ಶಾಸನಗಳಲ್ಲೂ ವ್ಯಕ್ತವಾಗಿವೆ. ವಿವಿಧ ಧರ್ಮ, ಪಂಥ ಹಾಗೂ ಆಚರಣೆಗಳಿಗೆ ಈ ಪರಿಸರದಲ್ಲಿ ಆಳ್ವಿಕೆ ಮಾಡಿದ ಅಧಿಕಾರವರ್ಗವು ಪ್ರೋತ್ಸಾಹಿಸಿರುವ ಸಂಗತಿಗಳಿವೆ.

ಇಲ್ಲಿ ಶೈವ, ವೈಷ್ಣವ ಹಾಗೂ ಜೈನ ಪಂಥಾಚರಣೆಗಳು ಅಸ್ತಿತ್ವದಲ್ಲಿದ್ದುದು ಅಲ್ಲಿರುವ ಶಾಸನ, ದೇವಾಲಯ ಹಾಗೂ ಮೂರ್ತಿಶಿಲ್ಪಗಳಲ್ಲಿ ಅಭಿವ್ಯಕ್ತವಾಗಿವೆ. ಪಶುಪತಿ ರೂಪದ ಶಿವನ ಆರಾಧನೆ ಈ ಪ್ರದೇಶದಲ್ಲಿ ಇದ್ದುದು ಕಂಡುಬರುತ್ತದೆ. ವೈದಿಕ ಸಂಸ್ಕೃತಿಯ ಯುಗದಲ್ಲಿಯೂ ಸಹ ಶಿವನನ್ನು 'ರುದ್ರ' ಸ್ವರೂಪದಲ್ಲಿ ಆರಾಧಿಸಲಾಗುತ್ತಿತ್ತು. ಕೊಣ್ಣೂರಿನ ಪರಿಸರದಲ್ಲಿ ಶೈವಧರ್ಮದ ಪ್ರಭಾವವನ್ನು ಇಲ್ಲಿ ಲಭ್ಯವಾದ ಶಾಸನ, ದೇವಾಲಯ ಹಾಗೂ ಮೂರ್ತಿಶಿಲ್ಪಗಳಿಂದ ಅರಿಯಬಹುದಾಗಿದೆ. ಈ ಭಾಗದಲ್ಲಿ ಶೈವ ಧರ್ಮವು ಪ್ರಬಲ ಧರ್ಮವಾಗಿತ್ತೆಂದು ಇಲ್ಲಿ ದೊರೆತ ಆಕರಗಳು ಪುಷ್ಟೀಕರಿಸುತ್ತವೆ. ಅರಸರ ಹಾಗೂ ಆತನ ಪರಿವಾರದವರು ಹಾಗೂ ಅಧಿಕಾರಿಗಳು ದೇವಾಲಯಗಳ ನಿರ್ಮಾಣ, ನಿರ್ವಹಣೆ ಹಾಗೂ ಜೀರ್ಣೋದ್ಧಾರದಂತಹ ಚಟುವಟಿಕೆಯಲ್ಲಿ ತೊಡಗುತ್ತಿದ್ದರು. ಅತೀಥ ಚಟುವಟಿಕೆಗಳಲ್ಲಿ ಭಾಗವಹಿಸಿ ದಾನ - ದತ್ತಿ ನೀಡಿರುವ ಅನೇಕ ಮಾಹಿತಿಗಳು ಇಲ್ಲಿನ ಶಿಲಾಶಾಸನಗಳಿಂದ ಪಡೆಯಬಹುದು. ಗೋಕಾಕ್ ಜಲಪಾತದ ಬಳಿಯಿರುವ ಮಹಾಲಿಂಗೇಶ್ವರ ದೇವಾಲಯದಲ್ಲಿನ ಶಾಸನ,[೧] ಕೊಣ್ಣೂರಿನ ಚಿಕ್ಕದೇವ ಅಥವಾ ಚಿಕಲೇಶ್ವರ ದೇವಾಲಯದ ಶಾಸನ,[೨] ಆರನೆಯ ವಿಕ್ರಮಾದಿತ್ಯನ ಕುಂದರಗಿ ಶಾಸನ,[೩] ಮಮದಾಪೂರ ಶಾಸನಗಳು,[೪] ಶಿವ ಸ್ತುತಿಯಿಂದಲೇ ಪ್ರಾರಂಭವಾಗುತ್ತವೆ. ಅಲ್ಲದೆ ಈ ಪರಿಸರದಲ್ಲಿ ಹಲವು ಶೈವ ದೇವಾಲಯಗಳಿದ್ದು, ಅವುಗಳಲ್ಲಿ ಗೋಕಾಕ್ ಜಲಪಾತದ ಬಳಿಯಿರುವ ಬಸವೇಶ್ವರ, ಈಶ್ವರಲಿಂಗ, ಮಹಾಲಿಂಗೇಶ್ವರ, ಕಾಡಸಿದ್ಧೇಶ್ವರ, ಕೊಣ್ಣೂರಿನ ಚಿಕಲೇಶ್ವರ, ಕಲಮೇಶ್ವರ, ಘೋಡಗೇರಿಯ ರಾಮಲಿಂಗೇಶ್ವರ, ನೀಲಕಂಠೇಶ್ವರ, ಪಾಚ್ಛಾಪುರದ ಮಲ್ಲಿಕಾರ್ಜುನ, ಕುಂದರಗಿಯ ಸಂಗಮೇಶ್ವರ ದೇವಾಲಯಗಳು ಪ್ರಮುಖವಾಗಿವೆ. ಕ್ರಿ.ಶ. ೧೦೩೨ರ ಕೊಣ್ಣೂರಿನ ಶಾಸನವು[೫] ಅಲ್ಲಿನ ಕಯಮೇಶ್ವರ (ಕಲಮೇಶ್ವರ) ದೇವಾಲಯಕ್ಕೆ ಸ್ಥಳೀಯ ಅಧಿಕಾರಿಯಾದ ಕಲಿಯಮಗಾವುಂಡನು, ದೇವಾಲಯದ ಜೀರ್ಣೋದ್ಧಾರಕ್ಕಾಗಿ ಭೂಮಿ ಹಾಗೂ ಆರು ಗದ್ಯಾಣ ಹಣವನ್ನು ನೀಡಿದನೆಂದು ಉಲ್ಲೇಖವಿದೆ. ಹಾಗೆಯೇ ಕುಂದರಗಿಯ ಶಾಸನವು[೬] ಸೇನಾಪತಿ ಮಹೇಶ್ವರಯ್ಯ ಎಂಬುವವರ ಹೆಸರನ್ನು ಉಲ್ಲೇಖಿಸುತ್ತದೆ. ಆತ ಕೂಡಾ ಶೈವನಾಗಿದ್ದನೆಂಬುದು ಸ್ಪಷ್ಟವಾಗುತ್ತದೆ. ಗೋಕಾಕ ಜಲಪಾತದ ಬಳಿಯಿರುವ ಮಹಾಲಿಂಗೇಶ್ವರ ದೇವಾಲಯದಲ್ಲಿರುವ ಶಾಸನ[೭] ಮಹಾಮಂಡಳೇಶ್ವರ ಕತ್ತಮದೇವನು ಇಲ್ಲಿನ ತಟೇಶ್ವರ (ಮಹಾಲಿಂಗೇಶ್ವರ) ದೇವಾಲಯದ ಜೀರ್ಣೋದ್ಧಾರಕ್ಕಾಗಿ ಕುಂದರಗಿಯ ಕಂಪಣದ ಬಳಿಯ ಕೊಂಡನೂರ ಇಂದಿನ

(ಕೊಣ್ಣೂರ)ನ್ನು ಶೈವ ಸಂತರಾದ 'ಅಮೃತರಾಶಿ' ಪಂಡಿತರಿಗೆ ದಾನ ನೀಡಿದ ಮಾಹಿತಿಯನ್ನು ಉಲ್ಲೇಖಿಸುತ್ತದೆ. ಇಲ್ಲಿನ ಮತ್ತೊಂದು ಶಾಸನ[೮] ದಂಡಾಧಿಕಾರಿಗಳಾದ ಧನ್ನುಗದೇವ, ಶಂಕರಯ್ಯನಾಯಕ, ರಾಣಯ್ಯನಾಯಕ, ಮಲ್ಲಿಯನಾಯಕರು, ತಟೇಶ್ವರ ದೇವಾಲಯಕ್ಕೆ ನೀಡಿದ ದಾನದ ವಿಷಯವನ್ನು ತಿಳಿಸುತ್ತದೆ. ಕ್ರಿ.ಶ ೧೨೪೬ರ ಮಮದಾಪುರ ಶಾಸನದಲ್ಲಿ[೯] ಚಾಮುಂಡನ ದಂಡಾಧಿಪತಿ ವಾಗೀಶ್ವರ ಅನೇಕ ಶಿವಮೂರ್ತಿಗಳನ್ನು ಪ್ರತಿಷ್ಠಾಪಿಸಿದ ಸಂಗತಿಗಳನ್ನು ತಿಳಿಸುತ್ತದೆ. ಚಾಮುಂಡ ತನ್ನ ತಂದೆಯಾದ ಮಲ್ಲಿನಾಥ ಹಾಗೂ ಅವನ ಸಹೋದರ ಇವರ ಹೆಸರಿನಲ್ಲಿ ಕುರುಂಬೆಟ್ಟ ಗಣದಲ್ಲಿ ಎರಡು ಶಿವಲಿಂಗ ಸ್ಥಾಪಿಸಿದ ಅಂಶಗಳು ಕೂಡಾ ಪ್ರಸ್ತಾಪಿಸಲ್ಪಟ್ಟಿವೆ. ಇವುಗಳ ಜೊತೆಗೆ ದೇವಾಲಯದಲ್ಲಿನ ಶಿವಲಿಂಗ, ನಂದಿ, ದೇವಕೋಷ್ಠದಲ್ಲಿರುವ ಶಿಲ್ಪಗಳು ಮತ್ತು ಶಿಖರ ಹಾಗೂ ಸುಖನಾಸಿ ಭಾಗದಲ್ಲಿರುವ ಶಿಲ್ಪಗಳು ಸಹ ಶೈವಧರ್ಮದ ಅಸ್ತಿತ್ವವನ್ನು ಪುಷ್ಠೀಕರಿಸುತ್ತವೆ. ದೇವಾಲಯದ ವಿವಿಧ ಭಾಗಗಳಲ್ಲಿ ಕಂಡುಬರುವ ಶಿವ-ಪಾರ್ವತಿಯರ, ಭೈರವ, ಭೈರವಿ, ಗಣೇಶನಂತಹ ಶಿಲ್ಪಗಳು ಆ ಕಾಲದ ಧಾರ್ಮಿಕ ವಿಷಯಗಳ ಪ್ರಾಮುಖ್ಯತೆಯನ್ನು ಸ್ಪಷ್ಟಪಡಿಸುತ್ತವೆ. ಭೈರವನನ್ನು ಪೂಜಿಸುತ್ತಿದ್ದ ಕಾಪಾಲಿಕರು ಈ ಭಾಗದಲ್ಲಿದ್ದರು. ಅವರು ಧರ್ಮಾಚರಣೆ ನಡೆಸಿಕೊಂಡು ಹೋಗಿರುವ ಸಂಗತಿಗಳ ಸೂಚನೆಗಳಿವೆ. ಈ ಪಂಥದ ಆಚರಣೆಗಳು ನಾಥ ಸಂಪ್ರದಾಯದ ಆಚರಣೆಯಲ್ಲಿ ಮುಂದುವರಿದ ಸೂಚನೆಗಳನ್ನು ಸಹ ಗಮನಿಸಬಹುದಾಗಿದೆ. ಮಮದಾಪುರದ ಶಾಸನವು ಕೆಲವು ಶೈವ ಮುನಿಗಳ ಹೆಸರುಗಳನ್ನು ಉಲ್ಲೇಖಿಸುತ್ತದೆ. ಸೂರ್ಯನನ್ನು ಆರಾಧಿಸುತ್ತಿದ್ದ ಸೌರರು ಇಲ್ಲಿ ಇದ್ದರೆನ್ನಲು ಈ ಪರಿಸರದಲ್ಲಿ ಸಿಕ್ಕ ಸೂರ್ಯನ ಶಿಲ್ಪಗಳೇ ಸಾಕ್ಷಿ. ಅವುಗಳಲ್ಲಿ ಪ್ರಮುಖವಾಗಿ ಗೋಕಾಕ ಜಲಪಾತದ ಬಳಿಯ ದತ್ತಾತ್ರೇಯ ದೇವಾಲಯ ಹಾಗೂ ಘೋಡಗೇರಿಯ ರಾಮಲಿಂಗೇಶ್ವರ ದೇವಾಲಯಗಳಲ್ಲಿ ಸೂರ್ಯನ ಶಿಲ್ಪಗಳನ್ನು ಕಾಣುತ್ತೇವೆ.

ಈ ಪರಿಸರದಲ್ಲಿ ವೈಷ್ಣವ ಧರ್ಮವು ಹೆಚ್ಚು ಪ್ರಭಾವಶಾಲಿಯಾಗಿ ಇರದಿದ್ದರೂ ಸಿಕ್ಕ ಕೆಲವು ಆಕರಗಳಿಂದ ಅದರ ಅಸ್ತಿತ್ವವನ್ನು ಅರಿಯಬಹುದಾಗಿದೆ. ಮಮದಾಪುರದ ಶಾಸನದ ಶಿಲ್ಪದ ಮೇಲ್ಭಾಗದಲ್ಲಿ ಬ್ರಹ್ಮ, ವಿಷ್ಣು, ಶಿವನ ಉಬ್ಬುಶಿಲ್ಪಗಳಿವೆ. ಈ ಪ್ರದೇಶದ ದೇವಾಲಯ ಹಾಗೂ ಶಿಖರಗಳಲ್ಲಿ ವಿಷ್ಣುವಿನ ಶಿಲ್ಪಗಳಿವೆ. ಘೋಡಗೇರಿಯ ನೀಲಕಂಠೇಶ್ವರ ದೇವಾಲಯದ ಅಂತರಾಳದ ದ್ವಾರಬಂಧದಲ್ಲಿ ವಿಷ್ಣುವಿನ ವಿವಿಧ ಅವತಾರಗಳ ಶಿಲ್ಪಗಳನ್ನು ಕೆತ್ತಲಾಗಿದೆ. ಇದೇ ಗ್ರಾಮದ ರಾಮಲಿಂಗೇಶ್ವರ ದೇವಾಲಯದಲ್ಲಿನ ನವರಂಗದ ದೇವಕೋಷ್ಠದಲ್ಲಿ ನಿಂತಭಂಗಿಯಲ್ಲಿರುವ ವಿಷ್ಣುವಿನ ಶಿಲ್ಪವಿದೆ. ಮಾವನೂರಿನ ಹೊಲವೊಂದರಲ್ಲಿ ದೊಡ್ಡದಾದ ಗಜಲಕ್ಷ್ಮಿ ಶಿಲ್ಪ ಫಲಕವೊಂದು ಸಿಕ್ಕಿದೆ. ಒಟ್ಟಿನಲ್ಲಿ ವೈಷ್ಣವ ಪಂಥವು ಈ ಭಾಗದಲ್ಲಿ ಅಸ್ತಿತ್ವದಲ್ಲಿದ್ದರೂ ಅಷ್ಟಾಗಿ ಅದರ ಪ್ರಭಾವವನ್ನು ಬೀರಲಿಲ್ಲವೆಂಬುದು ತಿಳಿದುಬರುತ್ತದೆ.

ಕೊಣ್ಣೂರಿನ ಪರಿಸರದಲ್ಲಿ ಜೈನ ಧರ್ಮವು ಕ್ರಿ.ಪೂ. ಮೂರನೆಯ ಶತಮಾನದಿಂದಲೂ ಅಸ್ತಿತ್ವದಲ್ಲಿರುವುದನ್ನು ಈಗಾಗಲೇ ವಿವರಿಸಲಾಗಿದೆ. ವರ್ತಮಾನದಲ್ಲೂ ಪ್ರಚಲಿತದಲ್ಲಿರುವ ಜೈನಧರ್ಮದ ಮಹತ್ವವನ್ನು ಅರಿಯಬಹುದು. ಕ್ರಿ.ಪೂ. ಮೂರನೆಯ ಶತಮಾನದಲ್ಲಿ ಮೌರ್ಯ ಚಕ್ರವರ್ತಿ

ಚಂದ್ರಗುಪ್ತನು ತನ್ನ ಗುರು ಭದ್ರಬಾಹುವಿನೊಂದಿಗೆ ದಕ್ಷಿಣಕ್ಕೆ ಬಂದಾಗ ಕರ್ನಾಟಕದ ಹಲವು ಸ್ಥಳಗಳಲ್ಲಿ ತಂಗಿರುವ ವಿಷಯ ಐತಿಹ್ಯಗಳ ಮೂಲಕ ತಿಳಿದುಬರುತ್ತದೆ. ಕೊಣ್ಣೂರಿನ ದಕ್ಷಿಣ ಭಾಗದಲ್ಲಿರುವ ಬೃಹತ್ ಶಿಲಾಗೋರಿಗಳನ್ನು ಸ್ಥಳೀಯರು ಇಂದು ಜೈನ ಮುನಿವರ್ಗ ತಪಸ್ಸು ಮಾಡಿದ ಗುಹೆ(ಗುಂಫಾ)ಗಳೆಂದು ಕರೆಯುವುದುಂಟು. ಇದನ್ನು ನಾವು ಅಲ್ಲಗೆಳೆಯಲಾಗದು. ಏಕೆಂದರೆ ಮೌರ್ಯರು ದಕ್ಷಿಣಕ್ಕೆ ಬಂದಮೇಲೆ ಕರ್ನಾಟಕದಲ್ಲಿ ಹಲವಾರು ಕಡೆ ಜೈನಧರ್ಮ ಪ್ರಸಾರಗೊಂಡಿತು. ಕೊಣ್ಣೂರು ಪರಿಸರ ಸಹ ಇದಕ್ಕೆ ಹೊರತಾಗಿರಲಿಲ್ಲ ಇಂತಹ ಬೃಹತ್ ಶಿಲಾಗೋರಿಗಳು ತೇರದಾಳ ಮತ್ತು ಬಾದಾಮಿಯ ಸುತ್ತಮುತ್ತಲೂ ಕೂಡ ಕಂಡುಬರುತ್ತವೆ. ಈ ಪ್ರದೇಶಗಳು ಸಹ ಪ್ರಸಿದ್ಧ ಜೈನಕೇಂದ್ರಗಳಾಗಿದ್ದವು. ಕೊಣ್ಣೂರಿಗೆ ಸು.೭೭೦ ಕ್ಕಿಂತಲೂ ಹೆಚ್ಚು ಜೈನಮುನಿಗಳು ಬಂದು ತಪಸ್ಸು ಮಾಡಿದರೆಂದು ಹೇಳಲಾಗುತ್ತದೆ. ಅವರು ತಪಸ್ಸು ಮಾಡಿದ ಪ್ರದೇಶಕ್ಕೆ ತಪಸೀಮರಡಿ ಎಂದು ಕರೆಯುವರು. ಕ್ರಿ.ಶ ೬-೭ನೆಯ ಶತಮಾನದ ಕೊಣ್ಣೂರಿನ ಶಾಸನವೊಂದು[೧೦] ಜೈನ ಶ್ಲೋಕದೊಂದಿಗೆ ಪ್ರಾರಂಭವಾಗುತ್ತದೆ. ಈ ಶಾಸನದ ಪ್ರಕಾರ ಜಂಬೂಖಂಡ ಗಣದ ಆಚಾರ್ಯನಂದ್ಯಾಚಾರ್ಯರಿಗೆ ಪೂಜೆಗಾಗಿ, ಶಿಕ್ಷಣ, ರೋಗಿಗಳ, ವೃದ್ಧರ ಮತ್ತು ತಪಸ್ವಿಗಳ ಉಪಯೋಗಕ್ಕಾಗಿ ಐವತ್ತು ನಿವರ್ತನ ಭೂಮಿಯನ್ನು ಇಂದ್ರ ನಂದಾದಿ ರಾಜನು ದಾನ ನೀಡಿದ್ದನ್ನು ಕೂಡಾ ಉಲ್ಲೇಖಿಸುತ್ತದೆ. ಅಂದರೆ ಕ್ರಿ.ಶ ೬ನೆಯ ಶತಮಾನದಲ್ಲಿಯೇ ಜೈನರು ಸಾಮಾಜಿಕ ಮತ್ತು ಧಾರ್ಮಿಕ ಕಾರ್ಯಗಳಿಗೆ ದಾನಧರ್ಮ ಮಾಡುತ್ತಿದ್ದರೆಂದು ನಮಗೆ ತಿಳಿದುಬರುತ್ತದೆ. ಕ್ರಿ.ಶ. ೧೦೮೭ರ ಕೊಣ್ಣೂರು ಶಾಸನದಲ್ಲಿ[೧೧] ಮಹಾಪ್ರಭು ನಿಧಿಯಮಗಾವುಂಡನು ಕೊಂಡನೂರಿ(ಕೊಣ್ಣೂರಿ)ನಲ್ಲಿ ನಿರ್ಮಿಸಿದ ಬಸದಿಗೆ ಭೂಮಿ, ಮನೆ, ನಿವೇಶನ, ಎಣ್ಣೆಗಾನ ಮತ್ತು ಹೂದೋಟವನ್ನು ದಾನ ನೀಡಿದ ಉಲ್ಲೇಖಗಳಿವೆ. ದಾನ ನೀಡಿದಾತ ಮೂಲಸಂಘ ಬಲಾತ್ಕಾರಗಣಕ್ಕೆ ಸೇರಿದವನಾಗಿದ್ದನೆಂದು ತಿಳಿದುಬರುತ್ತದೆ. ಹಾಗೆಯೇ ಇಲ್ಲಿನ ಮತ್ತೊಂದು ಶಾಸನವು ತಿಳಿಸುವಂತೆ[೧೨] ಜಯಕರ್ಣ ಎಂಬುವವನಿಂದ ನಿರ್ಮಿಸಲ್ಪಟ್ಟ ಜೈನ ದೇವಾಲಯಕ್ಕೆ ವಸುಪೂಜ್ಯ ಮುನಿಗಳಿಗೆ, ದಾನ ನೀಡಿದ ಮಾಹಿತಿಗಳಿವೆ. ಗೋಕಾಕದ ಜೈನ ಬಸದಿಯಲ್ಲಿನ ಸುಪಾರ್ಶ್ವನಾಥ ತೀರ್ಥಂಕರ ಶಿಲ್ಪದ ಪೀಠದಲ್ಲಿರುವ ಕ್ರಿ.ಶ. ೧೧-೧೨ನೆಯ ಶತಮಾನದ ಶಾಸನವು[೧೩] ಕಾರೆಯಗಣದ ರವಿಚಂದ್ರ ಮುನೀಶ್ವರನ ಶಿಷ್ಯ ಬರ್ಮದೇವ ನೃಪನ ಮಗ ಎರಗನು ಜಿನಮಂದಿರವನ್ನು ಮಾಡಿಸಿದ ವಿಷಯವನ್ನು ತಿಳಿಸುತ್ತದೆ. ಕೊಣ್ಣೂರಿನ ಜೈನಬಸದಿಯ ಸಭಾಮಂಟಪದಲ್ಲಿರುವ ಸು. ಕ್ರಿ.ಶ. ೧೨-೧೩ನೆಯ ಶತಮಾನದ ಶಾಸನ[೧೪]ದಲ್ಲಿ ಶ್ರೀ ಕುಮಾರಸೇನ ದೇವರ ಶಿಷ್ಯ ಮೂಲಸಂಘದ ನಾಗಸೇನ ದೇವರು ಎಂಬ ಉಲ್ಲೇಖವಿದೆ. ಕ್ರಿ.ಶ. ೧೨೦೪ರ ಕಲ್ಹೊಳ್ಳಿ ಶಾಸನವು[೧೫] ಜೈನಸ್ತುತಿಯೊಂದಿಗೆ ಪ್ರಾರಂಭವಾಗುತ್ತದೆ, ಮತ್ತು ಈ ಶಾಸನದ ರಚನಾಕಾರ ಕೂಡ ಜೈನನಾದ ಪಾರ್ಶ್ವನಾಥ ಪಂಡಿತ. ಇದೇ ಶಾಸನದಲ್ಲಿ ಹಲವಾರು ಜೈನಮುನಿಗಳ ಹೆಸರುಗಳನ್ನು ಪ್ರಸ್ತಾಪಿಸಲಾಗಿದೆ. ಶುಭಚಂದ್ರ ಭಟ್ಟಾರಕಮುನಿಗಳಿಗೆ ಕಾರ್ತವೀರ್ಯ ದೊರೆ ದಾನ ನೀಡಿದ ಅಂಶಗಳು ಇದರಲ್ಲಿವೆ. ಪಾಚ್ಛಾಪುರ ಬಸದಿಯೂ ಪ್ರಾಚೀನ ಕಾಲದ್ದು. ಆದರೆ ಅಲ್ಲಿರುವ ಪಾರ್ಶ್ವನಾಥನ ಶಿಲ್ಪವನ್ನು ಕ್ರಿ.ಶ. ೧೬೭೦ರ ಸುಮಾರಿಗೆ ಪ್ರತಿಷ್ಠಾಪಿಸಲಾಗಿದೆ. ಗೋಕಾಕ್, ಕೊಣ್ಣೂರು, ಘೋಟಗೇರಿ ಹಾಗೂ ಪಾಚ್ಛಾಪುರಗಳು ಪ್ರಾಚೀನ ಹಾಗೂ ಮಧ್ಯಯುಗದಲ್ಲಿ

ಪ್ರಸಿದ್ಧ ಜೈನಧಾರ್ಮಿಕ ಕೇಂದ್ರಗಳಾದ್ದಿರುವುದು ಮಹತ್ವ ವಿಚಾರವಾಗಿದೆ. ಈ ಭಾಗದಲ್ಲಿ ಜೈನಬಸದಿಗಳು ಹಾಗೂ ಪಾರ್ಶ್ವನಾಥ, ವೃಷಭನಾಥ, ಸುಪಾರ್ಶ್ವನಾಥ ತೀರ್ಥಂಕರ ಶಿಲ್ಪಗಳು ಹಾಗೂ ಶಾಸನೋಕ್ತ ಕೆಲವು ಮುನಿಗಳ ಮತ್ತು ಗಣಗಳ ಉಲ್ಲೆಖಗಳು ಕಂಡುಬಂದಿವೆ. ರವಿಚಂದ್ರ ಮುನೀಶ್ವರ, ಬರ್ಮದೇವ, ಎರಗ, ಸೈದ್ಧಾಂತಿಕ ನೆಮಿಚಂದ್ರ, ಶುಭಶ್ಚಂದ್ರ ಭಟ್ಟಾರಕ ಹಾಗೂ ಇನ್ನು ಅನೇಕ ಜೈನಮುನಿಗಳ ಹೆಸರುಗಳಿವೆ. ಹಾಗೆಯೇ ಬಲಾತ್ಕಾರಗಣ, ಕಾರೇಯಗಣ, ದೇಶೀಯಗಣ, ಜಂಬೂಖಂಡದ ಗಣಗಳು ಈ ಪರಿಸರದಲ್ಲಿ ಅಸ್ತಿತ್ವದಲ್ಲಿದ್ದುದು ನಮಗೆ ಇಲ್ಲಿ ಸಿಕ್ಕಿರುವ ಆಧಾರಗಳಿಂದ ತಿಳಿದುಬರುವುದು. ಮಧ್ಯಯುಗೀನ ಕರ್ನಾಟಕದ ಚರಿತ್ರೆಯಲ್ಲಿ ಪ್ರಮುಖ ಪಾತ್ರವಹಿಸಿದ್ದ ಯಾಪನೀಯ ಸಂಘ ಕೂಡಾ ಈ ಪರಿಸರದಲ್ಲಿ ತನ್ನ ಪ್ರಾಮುಖ್ಯತೆಯನ್ನು ಮೆರೆದಿರುವ ಸಾಧ್ಯತೆ ಇದೆ. ಒಟ್ಟಾರೆಯಾಗಿ ಜೈನಧರ್ಮವು ಈ ಪ್ರದೇಶದಲ್ಲಿದ್ದು ಮುಂದೆ ರಾಷ್ಟ್ರಕೂಟ ಹಾಗೂ ಕಲ್ಯಾಣ ಚಾಲುಕ್ಯ, ಅವರ ಸಾಮಂತರಾದ ರಟ್ಟರ ಕಾಲದಲ್ಲಿ ಉನ್ನತ ಸ್ಥಾನದಲ್ಲಿತ್ತು. ಅರಸರು ಮತ್ತು ಅಧಿಕಾರಿಗಳು ಈ ಧರ್ಮದ ಬೆಳವಣಿಗೆಗೆ ಪ್ರೋತ್ಸಾಹ ನೀಡಿರುವರು.

ವಿವಿಧ ಧಾರ್ಮಿಕ ಮತ-ಪಂಥಗಳು ಈ ಪ್ರದೇಶದಲ್ಲಿದ್ದು, ಇಲ್ಲಿನ ಪರಿಸರದಲ್ಲಿ ಧಾರ್ಮಿಕ ಸಮನ್ವತೆಯನ್ನು ಸಹ ಕಾಣುತ್ತೇವೆ. ೧೫-೧೬ನೆಯ ಶತಮಾನದಲ್ಲಿದ್ದ ಸಾವಳಗಿಯ ಶಿವಲಿಂಗೇಶ್ವರರು ಹಿಂದೂ-ಮುಸ್ಲಿಮರಲ್ಲಿ ಭಾವೈಕ್ಯತೆಯನ್ನು ಮೂಡಿಸಿ ತಮ್ಮ ಮಹಿಮೆಯನ್ನು ಮೆರೆದಿದ್ದಾರೆ. ಇವರು ಗುಲ್ಬರ್ಗಾದ ಖ್ಯಾತ ಸೂಫಿ ಸಂತರಾದ ಖ್ವಾಜಾ ಬಂದೇ ನವಾಜ್‌ರ ಸಮಕಾಲೀನರು ಶಿವಲಿಂಗೇಶ್ವರ ಗದ್ದುಗೆಯ ಮೇಲೆ ಹಿಂದೂ-ಮುಸ್ಲಿಂ ಶೈಲಿಯಲ್ಲಿ ಸ್ಮಾರಕವನ್ನು ನಿರ್ಮಿಸಲಾಗಿದೆ. ಇದೊಂದು ಧಾರ್ಮಿಕ ಸಾಮರಸ್ಯದ ಪ್ರತೀಕವಾಗಿದೆ.

ಕೊಣ್ಣೂರಿನ ಪರಿಸರದಲ್ಲಿ ಮಧ್ಯಕಾಲೀನ ಕರ್ನಾಟಕದಲ್ಲಿದ್ದ ಸಾಮಾಜಿಕ ವ್ಯವಸ್ಥೆಯನ್ನು ಕಾಣುತ್ತೇವೆ. ಸ್ತ್ರೀಯರು ಕೂಡಾ ಅಂದು ಪ್ರಮುಖ ಸ್ಥಾನವನ್ನು ಪಡೆದಿದ್ದರು ಎಂಬುದು ಇಲ್ಲಿ ದೊರೆತ ಶಾಸನಗಳೇ ಸಾಕ್ಷಿ. ಬ್ರಾಹ್ಮಣರು ಸಮಾಜದಲ್ಲಿ ಉನ್ನತ ಹಾಗೂ ಗೌರವಯುತವಾದ ಸ್ಥಾನವನ್ನು ಪಡೆದಿದ್ದರು. ಕ್ರಿ.ಶ. ೧೦೩೨ರ ಕೊಣ್ಣೂರು ಶಾಸನದಲ್ಲಿ[೧೬] ದಾನ ನೀಡಿದ ವ್ಯಕ್ತಿಗೆ ಮತ್ತು ಶಾಸನಕ್ಕೆ ಅವಮಾನಿಸಿದರೆ, ಅದು ಒಂದು ಕೋಟಿ ಬ್ರಾಹ್ಮಣರನ್ನು ಕೊಂದಪಾಪಕ್ಕೆ ಗುರಿಯಾಗಿರುವರೆಂದು ಉಲ್ಲೇಖಿಸುತ್ತದೆ. ಈ ವಿಷಯ ವರ್ಣ ಜಾತಿಗಳ ಜೀವಂತಿಕೆಯನ್ನು ತಿಳಿಸಿಕೊಡುತ್ತದೆ. ಗೋಕಾಕ್ ಜಲಪಾತದ ಬಳಿಯಿರುವ ಮಹಾಲಿಂಗೇಶ್ವರ ದೇವಾಲಯದಲ್ಲಿನ ಶಾಸನ,[೧೭] ದಾನ ನೀಡಿದ ವ್ಯಕ್ತಿ ಹಾಗೂ ಶಾಸನಕ್ಕೆ ಅವಮಾನಿಸಿದರೆ, ಅವನು ಬ್ರಾಹ್ಮಣ ಹತ್ಯೆಗೆ ಗುರಿಯಾಗುವನೆಂದು ತಿಳಿಸುತ್ತದೆ. ಮಮದಾಪುರ ಶಾಸನದಲ್ಲಿ[೧೮] ಬ್ರಹ್ಮಪುರಿ ಹನ್ನೆರಡು ವೃತ್ತಿಯ ಬ್ರಾಹ್ಮಣರಿಗೆ ಆದಿಶೆಟ್ಟಿ, ತಂದೆ ಮಲ್ಲಿಶೆಟ್ಟಿ ಹೊಳ್ಳಿಗಾವುಂಡ ಭೂದಾನ ನೀಡಿದ ಉಲ್ಲೇಖವಿದೆ. ಹನ್ನೆರಡು ವೃತ್ತಿಗಳೆಂದರೆ ವೇದಾಧ್ಯಾಮನ, ಧರ್ಮಶಾಸ್ತ್ರ ಅಧ್ಯಯನ, ಧರ್ಮಬೋಧನೆ, ಧಾರ್ಮಿಕ ವಿಧಿವಿಧಾನಗಳು, ನೀತಿಶಾಸ್ತ್ರ, ತರ್ಕಶಾಸ್ತ್ರ ಮುಂತಾದ ಕಾರ್ಯಗಳನ್ನು ಕೈಗೊಳ್ಳುವವರೆಂದು ವಿವರಿಸಲಾಗಿದೆ.

ವರ್ಣಾಶ್ರಮ ವ್ಯವಸ್ಥೆಯಲ್ಲಿ ಶೌರ್ಯದ ಕೆಲಸಗಳನ್ನು ನಿರ್ವಹಿಸುವ ವರ್ಗವನ್ನು ಸಾಮಾನ್ಯವಾಗಿ ಕ್ಷತ್ರಿಯರೆಂದು ಕರೆಯುತ್ತಾರೆ. ಆದರೆ ಕ್ಷತ್ರಿಯ ಎಂಬ ನಿರ್ದಿಷ್ಟವಾದ ಪದಪ್ರಯೋಗ ಇಲ್ಲಿರುವ ಶಾಸನಗಳಲ್ಲಿ ಇಲ್ಲ. ಆದರೆ ಆ ಕಾಲದ ಶೌರ್ಯ, ಸಾಹಸಗಳನ್ನು, ವಿಶೇಷವಾಗಿ ಸೈನಿಕವರ್ಗವು, ನಿರ್ವಹಿಸುತ್ತಿತ್ತು. ಈ ಹಿನ್ನೆಲೆಯಲ್ಲಿ ಇಂಥ ಅಧಿಕಾರಗಳ ಹಾಗೂ ಸೈನಿಕವರ್ಗವು ರಾಜ್ಯದ ಆಡಳಿತದ ವಿವಿಧ ಅಂಗಗಳಲ್ಲಿ ಪ್ರಮುಖ ಪಾತ್ರವಹಿಸಿರುವ ಸಾಧ್ಯತೆಗಳಿವೆ. ವೈಶ್ಯರು ಈ ಪ್ರದೇಶದಲ್ಲಿ ಪ್ರಮುಖಪಾತ್ರವನ್ನು ವಹಿಸಿದ್ದು ನಮಗೆ ಕಂಡುಬರುತ್ತದೆ. ಕೃಷಿ ಮತ್ತು ವ್ಯಾಪಾರ ಇವರ ಪ್ರಮುಖ ಉದ್ಯೋಗ. ಇವರು ಅನೇಕ ಪಂಡಿತರಿಗೆ ಹಾಗೂ ದೇವಾಲಯಗಳಿಗೆ ದಾನ ನೀಡಿದ ಮಾಹಿತಿಗಳು ಲಭ್ಯವಾಗಿವೆ. ಕಲ್ಲೊಳ್ಳಿಯ ಶಾಸನ[೧೯]ದಲ್ಲಿ ಪಟ್ಟಣದ ಶೆಟ್ಟಿಯರು ಮತ್ತು ಸಮಸ್ತ ಮುಮ್ಮರಿದಂಡಗಳು ಪಾರ್ಶ್ವನಾಥ ಜಿನಾಲಯಕ್ಕೆ ದಾನ-ದತ್ತಿ ನೀಡಿದ ಅಂಶಗಳನ್ನು ಕಾಣುತ್ತೇವೆ. ವ್ಯಾಪಾರವರ್ಗವು ಜೈನಧರ್ಮಕ್ಕೆ ಪೋಷಣೆ ನೀಡಿರುವ ವಿವರಗಳು ವಿಶೇಷತೆಯಿಂದ ಕೂಡಿದೆ. ಕ್ರಿ.ಶ. ೧೨೪೦ರ ಮಮದಾಪುರ ಶಾಸನದಲ್ಲಿ[೨೦] ಆದಿಶೆಟ್ಟಿಯ ತಂದೆ ಮಲ್ಲಿಶೆಟ್ಟಿ ಶ್ರೀ ಮದನಾದಿಯ ಬಣಂಜುವಟ್ಟಣಂ, ಹೊಳ್ಳಿಗಾವುಂಡ ಮುಂತಾದವರು ಬ್ರಹ್ಮಪುರಿಯ ಹನ್ನೆರಡು ವೃತ್ತಿಯ ಬ್ರಾಹ್ಮಣರಿಗೆ ದತ್ತಿ ನೀಡಿದ ವಿಷಯವನ್ನು ತಿಳಿಸಲಾಗಿದೆ. ಶೂದ್ರರ ಬಗ್ಗೆ ಇಲ್ಲಿಯ ಶಾಸನಗಳು ನೇರವಾಗಿ ಯಾವುದೇ ಉಲ್ಲೇಖವನ್ನು ನೀಡಿಲ್ಲ. ಕೃಷಿ ಚಟುವಟಿಕೆಗಳಲ್ಲಿ ಈ ಸಮುದಾಯಗಳು ತಮ್ಮನ್ನು ತೊಡಗಿಸಿಕೊಂಡಿದ್ದವು. ಮೇಲ್ವರ್ಗದ ಜನರಿಗೆ ದುಡಿಮೆಗಾರರಾಗಿ ಕೆಲಸ ಮಾಡುತ್ತಿದ್ದರು. ಆದರೆ, ದಾಖಲಾದ ಚರಿತ್ರೆಯಲ್ಲಿ ಈ ಸಮುದಾಯದ ವಿವರಗಳು ದಾಖಲಾಗದೆ ಮರೆಯಾಗಿ ಹೋಯಿತು. ಬಹುಶಃ ವರ್ತಮಾನದ ಸಾಮಾಜಿಕ ಜೀವನ ಸ್ಥಿತಿಗತಿಗಳು ಭೂತಕಾಲದ ಬಳುವಳಿಯಾಗಿದ್ದು ಅದು ಇಂದಿಗೂ ಮುಂದುವರಿದಿದೆ.

ಈ ಪರಿಸರದಲ್ಲಿ ಸಿಕ್ಕ ಶಾಸನಗಳು ಸ್ತ್ರೀಯರೂ ಪುರುಷರ ಹಾಗೆ ಸಮಾನವಾದ ಸ್ಥಾನಮಾನಗಳನ್ನು ಪಡೆದಿದ್ದರೆನ್ನುವುದನ್ನು ಸ್ಪಷ್ಟಪಡಿಸುತ್ತವೆ. ಅರಸರಿಗೆ ಆಡಳಿತ ಹಾಗೂ ಯುದ್ಧದಂತಹ ಸಂದರ್ಭದಲ್ಲಿ ಸಹಾಯ ಮಾಡಿದ್ದಲ್ಲದೆ, ಅವರೇ ಸ್ವತಃ ಅವುಗಳ ನೇತೃತ್ವವನ್ನು ವಹಿಸಿದ್ದುಂಟು. ಕ್ರಿ.ಶ. ೧೦೪೦ರ ಅರಸೀಬೀದಿ ಶಾಸನದ ಪ್ರಕಾರ[೨೧] ಕಲ್ಯಾಣದ ಚಾಲುಕ್ಯರ ಅಕ್ಕಾದೇವಿಯು ಗೋಕಾಗೆ (ಇಂದಿನ ಗೋಕಾಕ) ಕೋಟೆಯನ್ನು ಆಕ್ರಮಣ ಮಾಡಿರುವ ಸಂಗತಿಗಳು ತಿಳಿದುಬರುತ್ತವೆ. ಆಕೆ ಕಿಸುಕಾಡು-೭೦ ನಾಡನ್ನು ಆಳುತ್ತಿದ್ದಳು. ವಿಕ್ರಮಪುರ (ಅರಸಿಬೀದಿ) ಆಕೆಯ ರಾಜಧಾನಿ. ಇಲ್ಲಿರುವ ಬಸದಿಗೆ ಆಕೆ ದಾನ ಮಾಡಿದ ವಿಷಯೂ ಈ ಶಾಸನದಲ್ಲಿದೆ. ಕ್ರಿ.ಶ. ೧೨೦೪ರ ಕಲೊಳ್ಳಿಯ ಶಾಸನ[೨೨]ದಲ್ಲಿ ರಟ್ಟರ ಕಾಲದ ಕೆಲವು ರಾಣಿಯರ ಹೆಸರುಗಳನ್ನು ತಿಳಿಸಲಾಗಿದೆ. ಅವರಲ್ಲಿ ಲಕ್ಷ್ಮೀದೇವಿ (ಇಮ್ಮಡಿ ಸೇನನ ರಾಣಿ), ಪದ್ಮಲದೇವಿ (ಮುಮ್ಮಡಿ ಕಾರ್ತವೀರ್ಯನ ಪತ್ನಿ), ಚಂದ್ರಿಕಾದೇವಿ (ಲಕ್ಷ್ಮೀದೇವನ ಹೆಂಡತಿ), ಏಚಲಾದೇವಿ (ನಾಲ್ಕನೆಯ ಕಾರ್ತವೀರ್ಯನ ಹೆಂಡತಿ ಈಕೆಗೆ ಚಕ್ರವರ್ತಿ ತನುಚೆ ಎಂಬ ಬಿರುದಿತ್ತು). ಈ ಶಾಸನದಲ್ಲಿ ಕಾರ್ತವೀರ್ಯ ಮತ್ತು ಮಲ್ಲಿಕಾರ್ಜುನರ ತಾಯಿಯಾದ ಚಂದ್ರಿಕಾದೇವಿಯರ ಬಗೆಗೆ ಉಲ್ಲೇಖಿಸಲಾಗಿದೆ.

ಕ್ರಿ.ಶ. ೧೨೪೬ರ ಮಮದಾಪುರದ ಶಾಸನದಲ್ಲಿ[೨೫] ಕೆಲವು ಸ್ತ್ರೀಯರ ಉಲ್ಲೇಖಗಳು ಬರುತ್ತವೆ. ಅದರಲ್ಲಿ ದಂಡಾಧಿಪತಿ ವಾಗೀಶ್ವರನ ಸತಿ 'ಲಕ್ಕಾದೇವಿ'ಯು ಅತ್ಯಂತ ಸೌಂದರ್ಯ ಹಾಗೂ ಲಾವಣ್ಯ-ಗುಣ ಭೂಷಣಳಾಗಿದ್ದಳೆಂದು ತಿಳಿದುಬರುತ್ತದೆ. ಈ ಪರಿಸರದಲ್ಲಿ ಕಂಡುಬರುವ ಶಿಲ್ಪಗಳಿಂದ ಅಂದಿನ ಕಾಲದ ಉಡುಗೆ ತೊಡುಗೆ, ಆಭರಣಗಳು ಹಾಗೂ ಕೇಶಾಲಾಂಕಾರದ ವಿವರಗಳು ತಿಳಿದುಬರುತ್ತವೆ. ಅಂದು ಸ್ತ್ರೀ, ಪುರುಷರು ಕೂಡಾ ಸಮಾನವಾಗಿ ಆಭರಣಗಳನ್ನು ಧರಿಸುತ್ತಿದ್ದದ್ದು ಕಂಡುಬರುತ್ತದೆ.

ಈ ಪ್ರದೇಶದಲ್ಲಿ ಪ್ರಸಿದ್ಧಿ ಪಡೆದ ವಿದ್ವಾಂಸರು ಹಾಗೂ ಕವಿಗಳು ಇದ್ದರು. ಅವರಲ್ಲಿ ಪ್ರಸಿದ್ಧನಾದವರೆಂದರೆ ಪಾರ್ಶ್ವನಾಥ ಪಂಡಿತ. ಈತ ಪ್ರಸಿದ್ಧವಾದ ಕಲ್ಹೊಳ್ಳಿಯ ಶಾಸನದ ಕರ್ತೃ. ನಾಲ್ಕನೆಯ ಕಾರ್ತವೀರ್ಯನ ಆಸ್ಥಾನದಲ್ಲಿದ್ದನು. ಆತ 'ಪಾರ್ಶ್ವನಾಥ ಪುರಾಣಂ' ಎಂಬ ಕಥೆಯನ್ನು ರಚಿಸಿದ್ದಾನೆ.

ಕೊಣ್ಣೂರಿನ ಸುತ್ತಮುತ್ತಲಿನ ಪ್ರದೇಶದಲ್ಲಿ ಹಲವಾರು ವೀರಗಲ್ಲು, ಮಾಸ್ತಿಗಲ್ಲು ಹಾಗೂ ನಿಷಿದಿಗಲ್ಲುಗಳು ಲಭ್ಯವಾಗಿದ್ದು, ಅವು ಅಂದಿನ ಸಾಮಾಜಿಕ ಜೀವನದ ಚಿತ್ರಣವನ್ನು ತಿಳಿಸುತ್ತವೆ. ಘೋಡಗೇರಿಯ ಗಜಲಿಂಗೇಶ್ವರ ದೇವಾಲಯದ ಆವರಣದಲ್ಲಿ ವೀರಗಲ್ಲು ಹಾಗೂ ಮಾಸ್ತಿಗಲ್ಲುಗಳು, ಕೊಣ್ಣೂರಿನ ಕಲ್ಮೇಶ್ವರ ಹಾಗೂ ರಾಕ್ಷಿಗುಡಿಯಲ್ಲಿರುವ ವೀರಗಲ್ಲು ಮತ್ತು ಇಲ್ಲಿನ ಹಣಮಂತ ದೇವಾಲಯದ ಆವರಣದಲ್ಲಿರುವ ನಿಷಿದಿಗಲ್ಲುಗಳು ಪ್ರಮುಖವಾಗಿವೆ. ಇವು ಆ ಕಾಲದ ಸಾಮಾಜಿಕ ಜೀವನ ಮೌಲ್ಯಗಳನ್ನು ತಿಳಿಸುವ ಪ್ರತೀಕಗಳಾಗಿವೆ.

ಈ ಪರಿಸರದಲ್ಲಿ ವ್ಯಾಪಾರ-ವಾಣಿಜ್ಯ ಹಾಗೂ ಕೈಗಾರಿಕಾ ಚಟುವಟಿಕೆಗಳು ನಡೆದಿರುವ ಬಗೆಗೆ ವಿವರಗಳಿವೆ. ಇಲ್ಲಿ ದೊರೆತ ಹಲವಾರು ಶಾಸನಗಳಲ್ಲಿ ಹಾಗೂ ಸಾಹಿತ್ಯ ಕೃತಿಗಳಲ್ಲಿ ಇಂಥ ವಿಚಾರಗಳನ್ನು ಕಾಣುತ್ತೇವೆ. ಈ ವಿಷಯ ಕುರಿತು ಮೂರನೆಯ ಅಧ್ಯಾಯದಲ್ಲಿನ ಆಡಳಿತ ಎಂಬ ಉಪಶೀರ್ಷಿಕೆಯಡಿ ಕೂಲಂಕಷವಾಗಿ ಚರ್ಚಿಸಲಾಗಿದೆ.

ಪ್ರಸ್ತುತ ವಿಷಯಕ್ಕೆ ಸಂಬಂಧಪಟ್ಟ ಹಲವಾರು ಫಲಿತಗಳು ಅಧ್ಯಯನದ ಸಂದರ್ಭದಲ್ಲಿ ಕಂಡುಬಂದವು. ವಿಶೇಷವಾಗಿ ಪ್ರಾಚೀನ ನೆಲೆಗಳನ್ನು ಗುರುತು ಮಾಡುವುದು ಹಾಗೂ ಇಲ್ಲಿರುವ ದೇವಾಲಯ, ಮೂರ್ತಿಶಿಲ್ಪ ಹಾಗೂ ಶಾಸನ ಅವಶೇಷಗಳನ್ನು ಸಮಗ್ರವಾಗಿ ಅಧ್ಯಯನಕ್ಕೆ ಒಳಪಡಿಸಲಾಯಿತು. ಈ ಹಿಂದೆ ನಡೆದ ಅಧ್ಯಯನಗಳು ಹೆಚ್ಚಿನ ಸಮಗ್ರತೆಯನ್ನು ಪಡೆದಿರುವುದಿಲ್ಲ ಎಂಬ ಹಿನ್ನೆಲೆಯಲ್ಲಿ ಇಂತಹ ಕೊರತೆಯನ್ನು ಸಾಧ್ಯವಾದ ಮಟ್ಟಿಗೆ ನೀಗಿಸಿಕೊಳ್ಳುವ ಪ್ರಯತ್ನವನ್ನು ಕೈಗೊಳ್ಳಲಾಗಿದೆ. ಕ್ಷೇತ್ರಕಾರ್ಯದ ಮೂಲಕ ಪುರಾತತ್ತ್ವ ಹಾಗೂ ಪರಿಸರದ ವಿಷಯಗಳನ್ನು ಸೂಕ್ಷ್ಮವಾಗಿ ಪರಿಶೀಲಿಸುವ ಪ್ರಯತ್ನವನ್ನು ಮಾಡಲಾಗಿದೆ. ಇದುವರೆಗೂ ಪ್ರಕಟಣೆಯಾಗಿರದ ಹೊಸ ನೆಲೆಗಳನ್ನು ಪತ್ತೆಹಚ್ಚುವ ಹಾಗೂ ಅರ್ಥೈಸುವ ಪ್ರಯತ್ನ ಇಲ್ಲಿದೆ. ಈ ಹಿಂದೆ ಕೈಗೊಂಡ ಅಧ್ಯಯನಗಳು ಕೇವಲ

ನದಿದಂಡೆಯ ಪಾತ್ರಕ್ಕೆ ಸೀಮಿತವಾಗಿದ್ದು, ಪ್ರಸ್ತುತ ಅಧ್ಯಯನದಲ್ಲಿ ನದಿಯ ಪರಿಸರದಿಂದ ದೂರವಿರುವ ಕೆಲವು ಪುರಾತತ್ವ ಸಂಸ್ಕೃತಿ ನೆಲೆಗಳನ್ನು ಹುಡುಕಿ ಅವುಗಳನ್ನು ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ.

ಗುಮಚಿನಮರಡಿಯ ಆದಿಹಳೆಯ ಮತ್ತು ಮಧ್ಯಹಳೆಯಶಿಲಾಯುಗದ ನೆಲೆ, ನಿರ್ವಾಹಣ ಹಟ್ಟಿ ಸೂಕ್ಷ್ಮಶಿಲಾಯುಗದ ನೆಲೆ, ಮಾವನೂರು ಗ್ರಾಮದಲ್ಲಿನ ನವಶಿಲಾ ಹಾಗೂ ನಂತರದ ಕಾಲಾವಧಿಯ ಚಟುವಟಿಕೆಗಳನ್ನು ಬಿಂಬಿಸುವ ಅವಶೇಷಗಳನ್ನು ಹೊಂದಿರುವ ನೆಲೆಯನ್ನು ಗುರುತಿಸಿ ವಿವರವಾಗಿ ಅರ್ಥೈಸುವ ಪ್ರಯತ್ನವನ್ನು ಮಾಡಲಾಗಿದೆ. ಹಾಗೆಯೇ ಚಾರಿತ್ರಿಕ ಕಾಲಘಟ್ಟಕೆ ಸಂಬಂಧಿಸಿದ ಈ ಪ್ರದೇಶದ ಹಲವಾರು ಶಿಲಾಶಾಸನಗಳು ಪ್ರಕಟವಾಗಿದ್ದರೂ, ಅವುಗಳನ್ನು ಕ್ರಮಬದ್ಧವಾದ ಹಾಗೂ ವ್ಯವಸ್ಥಿತ ಅಧ್ಯಯನಕ್ಕೆ ಒಳಪಡಿಸಿರಲಿಲ್ಲ. ಈ ಕೊರತೆಯನ್ನು ನೀಗಿಸುವ ನಿಟ್ಟಿನಲ್ಲಿ ದೊರೆತ ಪ್ರತಿಯೊಂದು ದಾಖಲೆಯ ವಿವರವನ್ನು, ಈ ಪರಿಸರಕ್ಕೆ ಸಂಬಂಧಿಸಿದಂತೆ ಜೋಡಿಸಿಕೊಂಡು ಅರ್ಥೈಸಲಾಗಿದೆ. ಅಧ್ಯಯನದ ಮುಖ್ಯ ಉದ್ದೇಶ ಮತ್ತು ಕಾರ್ಯಸಾಧನೆ ಎಂದರೆ ಇಲ್ಲಿರುವ ದೇವಾಲಯ ಮೂರ್ತಿಶಿಲ್ಪಗಳನ್ನು ಕ್ಷೇತ್ರಕಾರ್ಯದ ಮೂಲಕ ಸಮಗ್ರ ಹಾಗೂ ಸೂಕ್ಷ್ಮವಾಗಿ ಪರಿಶೀಲಿಸಿ ದಾಖಲಿಸಲಾಯಿತು. ಇದಕ್ಕಾಗಿ ಪ್ರತಿ ಗ್ರಾಮದಲ್ಲಿನ ದೇವಾಲಯ ಸಂಬಂಧಿ ವಿಷಯಗಳನ್ನು ತಿಳಿದುಕೊಳ್ಳಲು ವಿವರವಾದ ಕ್ಷೇತ್ರಕಾರ್ಯವನ್ನು ಕೈಗೊಳ್ಳಲಾಯಿತು.

ಇಲ್ಲಿನ ದೇವಾಲಯಗಳು ವಿವಿಧ ಶೈಲಿಗಳನ್ನು ಹೊಂದಿದ್ದು ಅವುಗಳಲ್ಲಿ ಹಲವಾರು ಪ್ರಯೋಗಗಳು ನಡೆದಿರುವುದು ಕಂಡುಬರುತ್ತದೆ. ವಿಶಿಷ್ಟವಾದ ಕೆತ್ತನೆ ಹಾಗೂ ಶಿಲ್ಪಗಳಿಂದ ಕೂಡಿದ ಶಿಖರ ಹಾಗೂ ಭಿತ್ತಿಗಳಲ್ಲಿ ವಿವಿಧ ಬಗೆಯ ಶಿಲ್ಪಗಳನ್ನು ಜೋಡಿಸಲಾಗಿದೆ. ಶೈವ ಹಾಗೂ ಜೈನ ಪಂಥಗಳಿಗೆ ಸಂಬಂಧಿಸಿದ ದೇವಾಲಯಗಳು ಹೆಚ್ಚಾಗಿರುವ ಈ ಪ್ರದೇಶದಲ್ಲಿ ಬಹುಸಂಸ್ಕೃತಿಯ ಧಾರ್ಮಿಕ ಸಮನ್ವಯತೆಯು ಅಸ್ತಿತ್ವದಲ್ಲಿತ್ತು ಎಂಬುದರಲ್ಲಿ ಅನುಮಾನವಿಲ್ಲ. ೧೭ನೆಯ ಶತಮಾನದಲ್ಲಿ ಧಾರ್ಮಿಕ ಸಮನ್ವಯತೆಯನ್ನು ಪ್ರತಿಪಾದಿಸಿದ ಸಾವಳಗಿ ಶಿವಲಿಂಗೇಶ್ವರ ಭಾವೈಕ್ಯತಾ ಮಠವು ಈ ಪ್ರದೇಶದಲ್ಲಿದೆ. ಸಮಾಜದ ಉದಾರೀಕರಣ ಪ್ರತಿಪಾದಿಸಿದ ಹಾಗೂ ಜಡತ್ವವನ್ನು ಅಲ್ಲಗೆಳೆದ ಈ ಮಠದ ಪರಂಪರೆಯ ಪ್ರಭಾವವು ಈ ಪ್ರದೇಶದಲ್ಲಿ ಆಗಿರುವುದನ್ನು ಈವರೆಗೂ ಕಾಣುತ್ತೇವೆ. ಪವಾಡ ಪುರುಷ ಶಿವಲಿಂಗೇಶ್ವರರು ಹಾಗೂ ಖ್ಯಾತ ಸೂಫಿ ಸಂತ ಖ್ವಾಜಾ ಬಂದೇ ನವಾಜರು ಹಿಂದೂ-ಮುಸ್ಲಿಮರಲ್ಲಿ ಐಕ್ಯತೆಯನ್ನು ಮೆರೆದ ಮಹಾನುಭಾವರು. ಇವರಿಬ್ಬರೂ ಸಮಕಾಲೀನಲ್ಲಿ ಬಾಳಿಬದುಕಿದರು. ಸಾವಳಗಿಯಲ್ಲಿರುವ ಶಿವಲಿಂಗೇಶ್ವರರ ಗದ್ದುಗೆಯ ಮೇಲೆ ಹಿಂದೂ - ಮುಸ್ಲಿಂ ವಾಸ್ತುಶೈಲಿಯ ಸ್ಮಾರಕವನ್ನು ನಿರ್ಮಿಸಲಾಗಿದೆ. ಅದು ಇಂದಿಗೂ ಸಾಮರಸ್ಯದ ಸಂಕೇತವಾಗಿರುವ ಸಾವಳಗಿಯಲ್ಲಿ ಪ್ರತಿವರ್ಷ ವಿಜೃಂಭಣೆಯಿಂದ ಜಾತ್ರೆಯು ನಡೆಯುತ್ತದೆ. ಇದು ಹಿಂದೂ ಮುಸ್ಲಿಂ ಸಂಪ್ರದಾಯವನ್ನು ಮೇಳೈಸಿಕೊಂಡು ನಡೆಯುವ ಪ್ರಮುಖ ಜಾತ್ರೆಯಾಗಿದೆ. ಒಟ್ಟಿನಲ್ಲಿ ಇಂತಹ ಹತ್ತು ಹಲವು ಸಾಂಸ್ಕೃತಿಕ ಹೆಗ್ಗುರುತುಗಳನ್ನು ಹೊಂದಿರುವ ಈ ಪರಿಸರ ಕರ್ನಾಟಕದ ಪರಿಸರ ಇತಿಹಾಸ ಮತ್ತು ಸಂಸ್ಕೃತಿಯಲ್ಲಿ ಮಹತ್ವ ಪಡೆಯುವ ನಿಟ್ಟಿನಲ್ಲಿ ಈ ಅಧ್ಯಯನವನ್ನು ಕಟ್ಟಿಕೊಡುವ ಪ್ರಯತ್ನ ಮಾಡಲಾಗಿದೆ.

ಟಿಪ್ಪಣಿಗಳು

೧. ಎಆರ್‌ಐಇ, ೧೯೫೨-೫೩, ಅಪೆಂಡಿಕ್ಸ್ ಬಿ, ನಂ ೫೧-೫೩

೨. ಕೆ.ಐ, ಸಂ V, ನಂ ೬

೩. ಕೆ.ಐ, ಸಂ VI, ನಂ ೨೧

೪. ಎ.ಇ, XIX, ಪುಟ ೨೬

೫. ಕೆ.ಐ, ಸಂ V, ನಂ ೬

೬. ಕೆಐ, ಸಂ VI, ನಂ ೨೧

೭. ಎಆರ್‌ಐಇ, ೧೯೫೨-೫೩, ಅಪೆಂಡಿಕ್ಸ್ ಬಿ, ನಂ ೫೧

೮. ಎಆರ್‌ಐಇ, ೧೯೫೨-೫೩, ಅಪೆಂಡಿಕ್ಸ್ ಬಿ, ನಂ ೫೧

೯. ಎ.ಇ, XIX, ಪುಟ ೨೬

೧೦. ಎ.ಇ, XXI, ಪುಟ ೨೮೯-೯೩

೧೧. ಎಆರ್‌ಐಇ, ೧೯೫೨-೫೩, ಅಪೆಂಡಿಕ್ಸ್ ಬಿ, ನಂ ೫೪

೧೨. ಎಆರ್‌ಐಇ, ೧೯೫೨-೫೩, ಅಪೆಂಡಿಕ್ಸ್ ಬಿ, ನಂ ೫೫

೧೩. ಚಂದ್ರಶೇಖರ್ ತಾಬೋಜಿ, **Proceedings of History Congress**, Page 173-174

೧೪. ಶಾಸನ ಅಧ್ಯಯನ, ೨, ಪುಟ ೨೦-೨೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೫. ಕರ್ನಾಟಕ ಭಾರತಿ, ೬-೩

೧೬. ಕೆಐ, ಸಂ V, ನಂ. ೬

೧೭. ಎಆರ್‌ಐಇ, ೧೯೫೨-೫೩, ಅಪೆಂಡಿಕ್ಸ್ ಬಿ, ನಂ ೫೧

೧೮. ಎಇ, XIX, ಪುಟ ೨೬

೧೯. ಕರ್ನಾಟಕ ಭಾರತಿ, ೬-೩

೨೦. ಎಇ, XIX, ಪುಟ ೨೬

೨೧. ಎಇ, XVII, ಪುಟ ೧೯-೨೬

೨೨. ಕರ್ನಾಟಕ ಭಾರತಿ, ೬-೩

೨೩. ಎಇ, XIX, ಪುಟ ೧೯-೨೬

# ಆಕರ ಗ್ರಂಥಗಳು


## ಕನ್ನಡ

೦೧. ಅಪರ್ಣಾ ಕೂ.ಸ, ೧೯೯೯, **ದೇವಾಲಯ ವಾಸ್ತುಶಿಲ್ಪ ಪರಿಚಯ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೦೨. ೧೯. ಅಕ್ಕಿ.ಚಂದ್ರಶೇಖರ ಮತ್ತು ಮಂಗಿ ಮಹಾಲಿಂಗ, ೨೦೦೬, **ಗೋಕಾವಿ ಸಿರಿ ಸಂಪದ,** (ಸ್ಮರಣ ಸಂಚಿಕೆ) ಗೋಕಾಕ

೦೩. ೧೬. ಗುಂಜಾಳ ಎಸ್.ಆರ್, ೨೦೦೩, **ಬೆಳಗಾವಿ ಬೆಳಕು,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ಕೆಂಪಣ್ಣವರ ಸಿ.ಸಿ, (ಸಂ), ೧೯೯೦, **ಜೈನ ಕ್ಷೇತ್ರಗಳ ಐತಿಹ್ಯ,** ಬಿ.ಬಿ, ಕರ್ನವಾಡಿ, ಹಾರೂಗೇರಿ

೦೪. ೧೨. ಚಿದಾನಂದ ಮೂರ್ತಿ ಎಂ, ೧೯೬೬, **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ,** ಸಪ್ನಾ ಬುಕ್ ಹೌಸ್, ಬೆಂಗಳೂರು

೦೫. ೧೫. ಜೋಶಿ ಎಸ್.ಕೆ, (ಸಂ), ೨೦೦೫, **ಚಂದ್ರಪ್ರಭಾ,** ಶ್ರೀ ಚಂದ್ರಕಾಂತ ಸುಳ್ಳದ ಅಭಿನಂದನಾ ಸಂಸ್ಥೆ, ಶಿರಸಂಗಿ

೦೬. ೦೫. ಮರಿಯಪ್ಪ ಭಟ್ಟ ಎಂ, ೧೯೫೪, **ಪಾರ್ಶ್ವ ಪಂಡಿತ ವಿರಚಿತಂ, ಶ್ರೀ ಪಾರ್ಶ್ವನಾಥ ಪುರಾಣಂ,** ಮದ್ರಾಸು ಯುನಿವರ್ಸಿಟಿ, ಮದ್ರಾಸು

೦೭. **ಕರ್ನಾಟಕ ಗ್ರಾಮ ಸೂಚಿ,** ೧೯೮೫, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು

೦೮. ಪಾಟೀಲ ಎಸ್.ಬಿ, ೧೯೮೯, **ಕೂಹುಂಡಿನಾಡು,** ಬೆಳಗಾವಿ

೦೯. ಹಿರೇಮಠ ಬಿ.ಆರ್, ೧೯೮೯, **ಕರ್ನಾಟಕದ ಶಾಸನಗಳಲ್ಲಿ ವರ್ತಕರು,** ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೧೦. ಶಿವತಾರಕ್‌ಕೆ.ಬಿ, ೨೦೦೧, **ಕರ್ನಾಟಕದ ಪುರಾತತ್ವ ನೆಲೆಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೧. ಪಾಟೀಲ ಮನೋಜ ೧೯೮೭, **ಬೆಳಗಾವಿ ಜಿಲ್ಲಾ ಮಾರ್ಗದರ್ಶಿ,** ಪವನ ಪ್ರಕಾಶನ, ಬೆಳಗಾವಿ

೧೨. ರಾಜಶೇಖರ ಎಸ್, ೧೯೮೮, **ಕರ್ನಾಟಕ ಕಲೆ ಮತ್ತು ವಾಸ್ತುಶಿಲ್ಪ,** ಸುಜಾತಾ ಪಬ್ಲಿಕೇಶನ್ಸ್, ಧಾರವಾಡ

೧೩. ನಾಗಯ್ಯ ಜೆ.ಎಂ, ೧೯೯೨, **ಆರನೆಯ ವಿಕ್ರಮಾದಿತ್ಯನ ಶಾಸನಗಳ ಅಧ್ಯಯನ**, ವೀರಶೈವ ಅಧ್ಯಯನ ಅಕಾಡೆಮಿ, ಶ್ರೀ ನಾಗನೂರು ರುದ್ರಾಕ್ಷಿ ಮಠ, ಬೆಳಗಾವಿ

೧೪. ಸೂರ್ಯನಾಥ ಕಾಮತ, : ೧೯೯೯, **ಕರ್ನಾಟಕದ ಸಂಕ್ಷಿಪ್ತ ಇತಿಹಾಸ**, ಜ್ಯುಪಿಟರ್ ಬುಕ್ಸ್

೧೫. ಷೇಕ್‌ಅಲಿ.ಬಿ (ಪ್ರ ಸಂ) ಮತ್ತು ಸುಂದರ ಅ. (ಸಂ) ೧೯೯೭, **ಕರ್ನಾಟಕ ಚರಿತ್ರೆ ಸಂಪುಟ ೧**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೬. ಷೇಕ್‌ಅಲಿ.ಬಿ (ಪ್ರ ಸಂ) ಮತ್ತು ಸುಂದರ ಅ. (ಸಂ) ೧೯೯೭, **ಕರ್ನಾಟಕ ಚರಿತ್ರೆ ಸಂಪುಟ ೨**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೭. ಪರಮಶಿವಮೂರ್ತಿ ಡಿ.ವಿ, ೧೯೯೯, **ಕನ್ನಡ ಶಾಸನ ಶಿಲ್ಪ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೮. ಸಂಗಮೇಶ ಹಂಡಗಿ, ೨೦೦೩, **ಸಾವಳಗಿ ಶ್ರೀ ಶಿವಲಿಂಗೇಶ್ವರ ಪುರಾಣ, (ಪರಿಷ್ಕರಣೆ)**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೯. ಹಿರೇಮಠ ಆರ್.ಸಿ, ಕಲಬುರ್ಗಿ ಎಂ.ಎಂ, ೧೯೬೮, **ಕನ್ನಡ ಶಾಸನ ಸಂಪದ**, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೨೦. ಪಾಟೀಲ ಎಸ್.ಬಿ, ೧೯೮೨, **ರಟ್ಟರ ಕಾಲದ ಸಾಂಸ್ಕೃತಿಕ ಅಧ್ಯಯನ**, ಬಸವಶ್ರೀ ಪ್ರಕಾಶನ ಸಂಕೇಶ್ವರ

೨೧. ದೇವರಕೊಂಡಾರೆಡ್ಡಿ, (ಸಂ) ೨೦೦೬, **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೯**, ಬಾಗಲಕೋಟೆ ಜಿಲ್ಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೨. ನಾಯಕ ರಮೇಶ, (ಸಂ), ೨೦೦೭, **ಕರ್ನಾಟಕದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನಗಳ ಮರುಚಿಂತನೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೩. ವೆಂಕಟರಂಗೋಕಟ್ಟಿ, ೧೯೮೪, **ಮುಂಬೈ ಗೆಜೆಟಿಯರ್, ಕರ್ನಾಟಕ ಭಾಗ**, ಏಷಿಯನ್ ಎಜ್ಯುಕೇಶನ್ ಸರ್ವಿಸಸ್, ದೆಹಲಿ

೨೪. ಮುತಾಲಿಕ ಆರ್.ಆರ್, ೧೯೮೭, **ಹುಕ್ಕೇರಿ ತಾಲೂಕು ದರ್ಶನ**, ಐ.ಬಿ.ಎಚ್ ಪ್ರಕಾಶನ, ಬೆಂಗಳೂರು

೨೫. ಶೇಷಶಾಸ್ತ್ರೀ ಆರ್, ೧೯೮೨, **ಶಾಸನ ಪರಿಚಯ**, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ

೨೬. ಹಂಪ ನಾಗರಾಜಯ್ಯ, ೧೯೯೯, **ಯಾಪನೀಯ ಸಂಘ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

## ನಿಯತಕಾಲಿಕೆಗಳು


೧. ಕರ್ನಾಟಕ ಇತಿಹಾಸ ಅಕಾಡೆಮಿಯ ನಿಯತಕಾಲಿಕೆಗಳು

೨. ಕರ್ನಾಟ ಇತಿಹಾಸ ಪರಿಷತ್ತಿನ ನಿಯತಕಾಲಿಕೆಗಳು

೩. ಶಾಸನ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೪. ಚರಿತ್ರೆ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ


## ಇಂಗ್ಲೀಷ್ ಕೃತಿಗಳು


01. Burgess, 1874, **The Dolmens at Konnur and Aihole,** Indian Antiquary, Volume III

02. Burgess, James, 1874, **Report on the First Season`s Operation in the Belgaum and Kaladgi Districts,** January to May, 1874, Indian Museum, London

03. Cousens, Henry, 1926, **The Chalukyan Architecture of the Kanarese Districts,** Archaeological Survey of India, New Imperial Series. Volume XLII, Imperial Series India, Central Publication Branch, Calcutta

04. Deo.S.B, 1973, **Problem of South Indian Megaliths,** Kannada Research Institute, Karnatak University, Dharwad

05. Desai P.B. (ED) 1970, **History of Karnataka,** Kannada Research Institute, Karnataka University Dharwad

06. Desai P.B, 2001, **Jainisim in South India and some Jain Epigraphs,** Jaina Samskriti Samrakshaka Sangha, Solapura

07. Dhaky. M.A, 1977, **Indian Temple Forms in Karnataka, Inscriptions and Architecture,** Abhinav Publication Delhi

08. Dhaky. M.A, (ed) 1998, **Encyclopaedia of Indian Temple Architecture, South India Upper Dravidadesa,** Later Phase A.D. 973-1326. American Institute of Indian Studies, Indira Gandhi National Center for the Arts Delhi

09. Fleet.J.F, 1882, **Dynasties of the Kanarese District,** Bombay

10. Foote. R.B, 1916, **The Footes Collection of Indian Pre-Historic and Proto-Historic-Antiquities notes on their Ages and Distribution,** Govt Museam Chennai

11. Foekema Gerard, 2003, **Chalukya Architecture madieval Temples of Nothern Karnataka,** built during the rule Chalukyas of Kalyana and there after A.D. 1000-1300 Vol 1-3 Munshiram Manoharlal Publishers Pvt. Ltd New Delhi
12. Gururaja Rao B.K, 1971, **Megalithic Cultural in South India,** Prasaranga, University of Mysore
13. Joshi R.V, 1955, **Pleistocene Studies in the Malaprabha Basin, Karnataka,** Puna University
14. Kalaghatagi T.G, **Jainism and Karnataka Culture,** Dharwad
15. Kamath Suryanath U, 1982, **Karnataka State Gazetteer Belgaum District,** Bangalore
16. Kundangar K.G, 1939, **Inscriptions in Northern Karnataka and the Kolhapur State,** Arybhanu Press, Kolhapur
17. Panchamukhi R.S, 1953, **Archaeology of Karnataka,** Kannada Research Institute. Karnatak University,Dharwad
18. Pappu R.S, 1978, **Early Stone Age in Karnataka,** Archaeology of Karnataka (Ed. A.V.Narasimhamurthy) Prasaranga, University of Mysore
19. Rajashekhar S, 1985, **Karnataka Architecture,** Sujata Publication. Dharwad
20. Sharma S.R, 1940, **Jainism and Karnataka Culture,** Dharwad.
21. Soundara, Rajan K.V, 1972, **Indian Temple Style, the Personality of Hindu Architecture,** Munshiram Manoharalal Publishers, New Delhi
22. Sundara A, 1975, **The Early Chamber Tombs of South India.** University Publishers, New Delhi
23. Cambell James, 1884, **Belgaum Gazeteer, Govt Central Press,** Bombay
24. Ritti Srinivas,1973, **The Seunas (The Yadavas of Devagiri),** Karnataka University, Dharwad
25. Pappu R.S and Deo S.G, 1974, **Man Land relations during Paleaolithic Times in the Kaladagi Basin,Karnataka,** Deccan College, Poona

## ಇಂಗ್ಲೀಷ್ ಶಾಸನ ಸಂಪುಟಗಳು (Epigraphy Volumes)

* Karnataka Inscriptions Vol-v, Kannada Research Institute, Dharwad.
* Karnataka Inscriptions Vol-vi, Kannada Research Institute, Dharwad.
* Epigraphia Indica Vol-xvii, xix & xxi
* Annual Reports on South India Epigraphy, 1940-41
* Annual Reports on South India Epigraphy, 1952-53
* Gopal B.R, 1985, Corpus of Kadamba Inscriptions, Vol-i, Kadamba Institute of Cultural Studies, Sirsi
* The Discriptive list of stone and copper plate Inscriptions 1943-44, Kannada Research Institute, Dharwad

## ಇಂಗ್ಲೀಷ್ ನಿಯತಕಾಲಿಕೆಗಳು (English Journals)

1. Annual Reports of Bhandarkar Oriental Research Institute, Poona
2. Epigraphia Indica, New Delhi, Vol-i, 1 to xxxxv
3. The Indian Antiquary, Bombay
4. Journal of Oriantal Research Madras
5. Journal of Bombay Branch of the Royal Asiatic Society, Bombay
6. Journal of the Karnataka University (Social Sciene), Dharwad
7. Journal of the Karnataka History Congress, Bangalore
8. Indian Archaeology, 1967-68, Review

# ಸಂಕ್ಷೇಪಗಳು

| | | | |
|---|---|---|---|
| ೧. | ಜೆ.ಬಿ.ಬಿ.ಆರ್.ಎ.ಎಸ್ | : | ಜರ್ನಲ್ ಆಫ್ ಬಾಂಬೆ ಬ್ರ್ಯಾಂಚ್ ಆಫ್ ರಾಯಲ್ ಏಷ್ಯಾಟಿಕ್ ಸೊಸೈಟಿ |
| ೨. | ಎ.ಆರ್.ಐ.ಇ | : | ಆನ್ಯುವಲ್ ರಿಪೋರ್ಟ್ ಆಫ್ ಇಂಡಿಯನ್ ಎಫಿಗ್ರಫಿ |
| ೩. | ಕೆ.ಐ | : | ಕರ್ನಾಟಕ ಇನ್ಸ್‌ಕ್ರಿಪ್ಷನ್ಸ್ |
| ೪. | ಇ.ಐ | : | ಎಪಿಗ್ರಾಫಿಯಾ ಇಂಡಿಕಾ |
| ೫. | ಐ.ಎ | : | ಇಂಡಿಯನ್ ಆಂಟಿಕ್ವರಿ |
| ೬. | ಐ.ಎ.ಆರ್ | : | ಇಂಡಿಯನ್ ಅರ್ಕಿಯಾಲಜಿ ರಿವ್ಯೂವ್ |
| ೭. | ಬಿ.ಕೆ.ಐ | : | ಬಾಂಬೆ ಕರ್ನಾಟಕ ಇನ್ಸ್‌ಕ್ರಿಪ್ಷನ್ಸ್ |
| ೮. | ಕೆ.ಆರ್.ಐ | : | ಕನ್ನಡ ರಿಸರ್ಚ್ ಇನ್ಸಿಟಿಟ್ಯೂಟ್ |
| ೯. | ಸೌ.ಇ.ಇ | : | ಸೌಥ್ ಇಂಡಿಯನ್ ಇನ್ಸ್‌ಕ್ರಿಪ್ಷನ್ಸ್ |
| ೧೦. | ಜೆಕೆಯು | : | ಜರ್ನಲ್ ಆಫ್ ಕರ್ನಾಟಕ ಯುನಿವರ್ಸಿಟಿ |

## ಛಾಯಾಚಿತ್ರಗಳ ವಿವರಣೆ

೧. ಗೋಕಾಕ್ ಜಲಪಾತದ ಬಂಡೆಗಲ್ಲುಗಳು

೨. ಘಟಪ್ರಭಾ ನದಿ ಕಣಿವೆಯ ವಿಹಂಗಮ ನೋಟ

೩. ಹಳೆಯ ಶಿಲಾಯುಗದ ಉಪಕರಣಗಳು - ಲೋಳಸೂರ

೪. ಹಳೆಯ ಶಿಲಾಯುಗದ ಉಪಕರಗಳು - ಗುಮಚಿನಮರಡಿ

೫. ಸೂಕ್ಷ್ಮ ಶಿಲಾಯುಗದ ಉಪಕರಣಗಳು - ನದಿಗುಡಿಖೇತ್ರ ಮತ್ತು ಘೊಡಗೇರಿ

೬. ಶಿಥಿಲವಾದ ಬೃಹತ್ ಶಿಲಾಯುಗದ ಹಾದಿಕೋಣೆ - ಕೊಣ್ಣೂರು

೭. ಸುಸ್ಥಿತಿಯಲ್ಲಿರುವ ಬೃಹತ್ ಶಿಲಾಯುಗದ ಹಾದಿಕೋಣೆ - ಕೊಣ್ಣೂರು

೮. ಭಾರತೀಯ ಪುರಾತತ್ವ ಇಲಾಖೆಯಿಂದ ರಕ್ಷಿಸಲ್ಪಟ್ಟ ಬೃಹತ್ ಶಿಲಾಗೋರಿ - ಕೊಣ್ಣೂರು

೯. ಚಿಕಲೇಶ್ವರ ದೇವಾಲಯದ ಮುಂಭಾಗ - ಕೊಣ್ಣೂರು

೧೦. ಸುಖನಾಸಿ ಫಲಕ, ಚಿಕಲೇಶ್ವರ ದೇವಾಲಯ - ಕೊಣ್ಣೂರು

೧೧. ಕದಂಬನಾಗರ ಶಿಖರ, ಚಿಕಲೇಶ್ವರ ದೇವಾಲಯ - ಕೊಣ್ಣೂರು

೧೨. ದೇವಕೋಷ್ಠ ಚಿಕಲೇಶ್ವರ ದೇವಾಲಯ - ಕೊಣ್ಣೂರು

೧೩. ಶಿಥಿಲವಾದ ಬೃಹತ್ ಶಿಲಾವೃತ್ತದ ಹಾದಿಕೋಣೆ - ಘೊಡಗೇರಿ

೧೪. ಗೊಡಚಿನಮಲ್ಕಿ ಜಲಪಾತದ ಬಳಿಯ ಡೋಲ್‌ಮೆನ್ - ಘೊಡಗೇರಿ

೧೫. ಬಸವೇಶ್ವರ ದೇವಾಲಯದ ಪಾರ್ಶ್ವನೋಟ - ಗೋಕಾಕ್ ಜಲಪಾತ

೧೬. ಕುಳಿತಿರುವ ಪಾರ್ಶ್ವನಾಥನ ಶಿಲ್ಪ, ಪಾರ್ಶ್ವನಾಥ ಬಸದಿ - ಕೊಣ್ಣೂರು

೧೭. ಯತಿಶಿಲ್ಪ, ಈಶ್ವರಲಿಂಗ ದೇವಾಲಯದ ಬಲಬದಿ ಗೋಕಾಕ್ - ಜಲಪಾತ

೧೮. ಸೂರ್ಯನ ಶಿಲ್ಪ, ಈಶ್ವರಲಿಂಗ ದೇವಾಲಯದ ಬಲಬದಿ - ಗೋಕಾಕ್ ಜಲಪಾತ

೧೯. ಮಹಾಲಿಂಗೇಶ್ವರ ದೇವಾಲಯದ ವಿಹಂಗಮ ನೋಟ - ಗೋಕಾಕ್ ಜಲಪಾತ

೨೦. ಅಧಿಷ್ಠಾನ, ಮಹಾಲಿಂಗೇಶ್ವರ ದೇವಾಲಯ - ಗೋಕಾಕ್ ಜಲಪಾತ

೨೧. ದೇವಕೋಷ್ಠ ಹಾಗೂ ಭಿತ್ತಿ, ಮಹಾಲಿಂಗೇಶ್ವರ ದೇವಾಲಯ - ಗೋಕಾಕ್ ಜಲಪಾತ

೨೨. ನವರಂಗ ಹಾಗೂ ಸ್ತಂಭಗಳು, ಮಹಾಲಿಂಗೇಶ್ವರ - ದೇವಾಲಯ ಗೋಕಾಕ್ ಜಲಪಾತ

೨೩. ಮಂಟಪದಲ್ಲಿನ ಕಕ್ಷಾಸನ, ಮಹಾಲಿಂಗೇಶ್ವರ ದೇವಾಲಯ - ಗೋಕಾಕ್ ಜಲಪಾತ

೨೪. ಶಿಖರದ ಭಾಗ, ದತ್ತಾತ್ರೇಯ ದೇವಾಲಯ - ಗೋಕಾಕ್ ಜಲಪಾತ

೨೫. ಸೂರ್ಯನ ವಿಗ್ರಹ, ದತ್ತಾತ್ರೇಯ ದೇವಾಲಯದ - ಗೋಕಾಕ್ ಜಲಪಾತ

೨೬. ಚಾಮುಂಡಿ ಶಿಲ್ಪ, ದತ್ತಾತ್ರೇಯ ದೇವಾಲಯದ - ಗೋಕಾಕ್ ಜಲಪಾತ

೨೭. ತ್ರಿಮುಖ ಶಿವನ ಶಿಲ್ಪ, ದತ್ತಾತ್ರೇಯ ದೇವಾಲಯ - ಗೋಕಾಕ್ ಜಲಪಾತ

೨೮. ಭೈರವ ಶಿಲ್ಪ, ಕಾಡಸಿದ್ಧೇಶ್ವರ ದೇವಾಲಯದ - ಗೋಕಾಕ್ ಜಲಪಾತ

೨೯. ವೀರಗಲ್ಲು, ರಾಕ್ಷಿಗುಡಿ - ಕೊಣ್ಣೂರು

೩೦. ಕದಂಬನಾಗರ ಶಿಖರ ಹಾಗೂ ಸುಖನಾಸಿ, ಸಂಗಮೇಶ್ವರ ದೇವಾಲಯ - ಕುಂದರಗಿ

೩೧. ಶಿಥಿಲವಾದ ಬಸವೇಶ್ವರ ದೇವಾಲಯ - ಮಾವನೂರು

೩೨. ಶಿವಪಾರ್ವತಿ ಶಿಲ್ಪ, ಬಸವೇಶ್ವರ ದೇವಾಲಯ - ಮಾವನೂರು

೩೩. ವೀರಗಲ್ಲು, ವಿರಕ್ತಮಠದ ಕಂಪೌಂಡ್ ಗೋಡೆ - ಘೋಡಗೇರಿ

೩೪. ಸಾಲಿಗ್ರಾಮ ಶಿಲಾಮೂರ್ತಿ, ಗಜಲಿಂಗೇಶ್ವರ ದೇವಾಲಯ - ಘೋಡಗೇರಿ

೩೫. ನಿಷಿದಿಗಲ್ಲು, ಹನುಮಂತ ದೇವಾಲಯ ಆವರಣ - ಕೊಣ್ಣೂರು

೩೬. ಸಭಾಮಂಟಪ ಹಾಗೂ ಸ್ತಂಭಗಳು, ಮಹಾಲಿಂಗೇಶ್ವರ ದೇವಾಲಯ - ಗೋಕಾಕ್ ನಗರ

೩೭. ಶಿಥಿಲವಾದ ದ್ರಾವಿಡ ಶಿಖರ, ನೀಲಕಂಠೇಶ್ವರ ದೇವಾಲಯ - ಘೋಡಗೇರಿ

೩೮. ಒಕ್ಕೈ ಮಾಸ್ತಿಗಲ್ಲು (ಬಲಗೈ), ಗಜಲಿಂಗೇಶ್ವರ ದೇವಾಲಯ - ಘೋಡಗೇರಿ

೩೯. ಗಣಪತಿ ಶಿಲ್ಪ, ರಾಮಲಿಂಗೇಶ್ವರ ದೇವಾಲಯ - ಘೋಡಗೇರಿ

೪೦. ಒಕ್ಕೈ ಮಾಸ್ತಿಗಲ್ಲು (ಎಡಗೈ), ಗಜಲಿಂಗೇಶ್ವರ ದೇವಾಲಯ - ಘೋಡಗೇರಿ

೪೧. ವೀರಸತಿಗಲ್ಲು, ಗಜಲಿಂಗೇಶ್ವರ ದೇವಾಲಯ - ಘೋಡಗೇರಿ

೪೨. ಪಾರ್ಶ್ವನಾಥನ ಶಿಲ್ಪ, ಪಾರ್ಶ್ವನಾಥ ಬಸದಿ - ಘೋಡಗೇರಿ

೪೩. ಬ್ರಹ್ಮನ ಶಿಲ್ಪ, ರಾಮಲಿಂಗೇಶ್ವರ ದೇವಾಲಯ - ಘೋಡಗೇರಿ

೪೪. ತ್ರಿಕೂಟ ಬಸವೇಶ್ವರ ದೇವಾಲಯ - ಅರಭಾವಿ

೪೫. ಕೆತ್ತನೆಯ ಸ್ತಂಭ, ಬಸವೇಶ್ವರ ದೇವಾಲಯ - ಗೋಕಾಕ್ ಜಲಪಾತ

೪೬. ವಿಷ್ಣುವಿನ ಶಿಲ್ಪ, ರಾಮಲಿಂಗೇಶ್ವರ ದೇವಾಲಯ - ಘೋಡಗೇರಿ

೪೭. ಸಪ್ತಮಾತೃಕೆಯ ಶಿಲ್ಪ, ರಾಮಲಿಂಗೇಶ್ವರ ದೇವಾಲಯ - ಘೋಡಗೇರಿ

೪೮. ಸೂರ್ಯನ ಶಿಲ್ಪ, ರಾಮಲಿಂಗೇಶ್ವರ ದೇವಾಲಯ - ಘೋಡಗೇರಿ

೪೯. ವೃಷಭನಾಥನ ಶಿಲ್ಪ, ಪಾರ್ಶ್ವನಾಥ ಬಸದಿ - ಗೋಕಾಕ್ ನಗರ

೫೦. ಕೆತ್ತನೆಯ ಸ್ತಂಭ, ಮಹಾಲಿಂಗೇಶ್ವರ ದೇವಾಲಯ - ಗೋಕಾಕ್ ನಗರ

೫೧. ಧರಣೇಂದ್ರ ಶಿಲ್ಪ, ಪಾಯಸಾಗರ ಶಾಲೆಯ ಹಿಂಭಾಗದ ಗುಹೆ - ಗೋಕಾಕ್ ನಗರ

೫೨. ಗಜಲಕ್ಷ್ಮಿ ಶಿಲ್ಪ, ಬಸವೇಶ್ವರ ದೇವಾಲಯದ ಹತ್ತಿರ - ಮಾವನೂರು

೫೩. ಉಮಾ-ಮಹೇಶ್ವರ ಶಿಲ್ಪ, ದತ್ತಾತ್ರೇಯ ದೇವಾಲಯ - ಗೋಕಾಕ್ ಜಲಪಾತ

೫೪. ಭೈರವ ಶಿಲ್ಪ, ಪರಿವೀಕ್ಷಣ ಮಂದಿರ - ಹಿಡಕಲ್ ಅಣೆಕಟ್ಟು

೫೫. ನಾಗಶಿಲ್ಪ, ಈಶ್ವರಲಿಂಗ ದೇವಾಲಯದ ಬಲಭಾಗ - ಗೋಕಾಕ್ ಜಲಪಾತ

೫೬. ಶಿವನ ಶಿಲ್ಪ, ಪರಿವೀಕ್ಷಣ ಮಂದಿರ - ಹಿಡಕಲ್ ಅಣೆಕಟ್ಟು

೫೭. ಪಾರ್ಶ್ವನಾಥನ ಶಿಲ್ಪ, ಪಾರ್ಶ್ವನಾಥ ಬಸದಿ - ಗೋಕಾಕ್ ನಗರ

೫೮. ಕೆತ್ತನೆಯ ದ್ವಾರ, ದತ್ತಾತ್ರೇಯ ದೇವಾಲಯ - ಗೋಕಾಕ್ ಜಲಪಾತ

೫೯. ಪಾರ್ಶ್ವನಾಥನ ಶಿಲ್ಪ, ಪಾಯಸಾಗರ ಶಾಲೆಯ ಹಿಂಭಾಗದ ಗುಹೆ - ಗೋಕಾಕ್ ನಗರ

೬೦. ಕೋಟೆಯ ಪ್ರವೇಶದ್ವಾರ - ಪಾಚ್ಛಾಪುರ

೬೧. ಶಿಥಿಲವಾದ ಕಾವಲುಗೋಪುರ - ಪಾಚ್ಛಾಪುರ

೬೨. ಅಡವಿ ಸಿದ್ಧೇಶ್ವರ ಮಠ - ಕುಂದರಗಿ

೬೩. ಪ್ರವೇಶದ್ವಾರ, ದುರದುಂಡೇಶ್ವರ ಮಠ - ಅರಭಾವಿ

೬೪. ಕಾವಲುಗೋಪುರ - ಶಿಂಧಿಕುರಬೆಟ್ಟ

೬೫. ಸ್ತಂಭಗಳು, ದುರದುಂಡೇಶ್ವರ ಮಠ - ಅರಭಾವಿ

೬೬. ಹಿಂದೂ - ಮುಸ್ಲಿಂ ಶೈಲಿಯ ಶಿವಲಿಂಗೇಶ್ವರ ಗದ್ದುಗೆ - ಸಾವಳಗಿ

# ಬೆಳಗಾಂವ ಜಿಲ್ಲೆ




ಕೊಣ್ಣೂರು ಪರಿಸರ

1) ಕೊಣ್ಣೂರು
2) ಗೋಕಾಕ್
3) ಕೊಳವಿ
4) ಪಾಶ್ಚಾಪೂರ
5) ಮಾವನೂರು
6) ಘೋಡಗೇರಿ
7) ನಿರ್ವಾಣಹಟ್ಟಿ
8) ಹಿಡಕಲ್
9) ಕುಂದರಗಿ
10) ಗೊಡಚಿನಮಲ್ಕಿ
11) ಗುಮಚನಮರಡಿ




೧. ಮಹಾಲಿಂಗೇಶ್ವರ ದೇವಾಲಯದ ತಲವಿನ್ಯಾಸ, ಗೋಕಾಕ ಜಲಪಾತ



೨. ಕಾಡಸಿದ್ಧೇಶ್ವರ ದೇವಾಲಯ - ಗೋಕಾಕ ಜಲಪಾತ



೨. ಬಿಕಲೇಶ್ವರ ದೇವಾಲಯ - ಕೊಳ್ಳೂರು



೪. ರಾಮಲಿಂಗೇಶ್ವರ ದೇವಾಲಯ - ಹೊಂಡಗೇರಿ.



ಶ್ರೀ . ಸಂಗಮೇಶ್ವರ ದೇವಾಲಯ - ಕುಂದರಗಿ

